ಬಂಡಾಯ : 10 ವರ್ಷ ಪ್ರಶ್ನೋತ್ತರ ವಿಶೇಷ-1

# ಅನ್ವೇಷಣೆ

ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ

ಸಂಚಿಕೆ : 33

ಬೆಲೆ ರೂ. 5/-



ಚಂದ್ರನಿಗೆ ಸೇತುವೆ : ಕಲೆ : ಕೆ. ಕೆ. ಹೆಬ್ಬಾರ್

## ಸಾಹಿತ್ಯ ಲೋಕದ ಜ್ವಾಲಾಮುಖಿ ಕಟ್ಟೀಮನಿ-ನೆನಪು

ಪ್ರಗತಿಪರ
ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ
ಚಟುವಟಿಕೆಗಳಿಗೆ

ಸಂಪುಟ : 5 ಜುಲೈ-ಆಗಸ್ಟ 89 ಸಂಚಿಕೆ : 33



o 'ಅನ್ವೇಷಣೆ' ಸಾಹಿತ್ಯ–ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ದ್ವೈಮಾಸಿಕ.

o ಪ್ರಕಟಣೆಗೆ ಕಳುಹಿಸುವ ಲೇಖನ, ವಿಮರ್ಶಾ ಬರಹ, ಕವನಗಳನ್ನು ಆದಷ್ಟು ಟೈಪು ಮಾಡಿ ಕಳುಹಿಸಿ.

o ಅಪ್ರಕಟಿತ ಬರಹ ವಾಪಸ್ಸು ಬೇಕಿದ್ದರೆ ಸಾಕಷ್ಟು ಅಂಚೆ ಚೀಟಿ ಇರಿಸಿ.

o ವಿಳಾಸ ಬದಲಾದರೆ ದಯವಿಟ್ಟು ತಿಳಿಸಿ.

o ಚಂದಾ ಹಣವನ್ನು M.O. ಇಲ್ಲವೆ D.D. ಮೂಲಕ ಕಳುಹಿಸಿ. ಚೆಕ್ ಕಳುಹಿಸುವಾಗ ರೂ. 5 ಹೆಚ್ಚು ಕಳುಹಿಸಿ.

o ವಾ. ಚಂದಾ ರೂ. 35 (ವ್ಯಕ್ತಿಗಳಿಗೆ)
ರೂ. 40 (ಸಂಸ್ಥೆ ಮತ್ತು ಗ್ರಂಥಾಲಯ)
3 ವರ್ಷಕ್ಕೆ ರೂ. 100
ಅಜೀವ ರೂ. 400 (ವ್ಯಕ್ತಿಗಳಿಗೆ)
ರೂ. 500 (ಸಂಸ್ಥೆ/ಗ್ರಂಥಾಲಯಗಳಿಗೆ)

ಸಂಪರ್ಕ ವಿಳಾಸ : ಸಂಪಾದಕ, "ಅನ್ವೇಷಣೆ"
478, "ಕಾದಂಬರಿ", 11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು-560 040.

*ಮುಖಪುಟ ಚಿತ್ರ ಕೃಪೆ: ಕರ್ನಾಟಕ ಲಲಿತಕಲಾ ಅಕಾಡೆಮಿ.

○ಬಸವರಾಜ ಕಟ್ಟೀಮನಿ ಅವರ ನಿಧನಕ್ಕೆ ಅನ್ವೇಷಣೆ ಸಂತಾಪ ಸೂಚಿಸುತ್ತದೆ.

ಈ ಸಂಚಿಕೆಯ ಲೇಖಕರು :

- ಪ್ರೊ॥ ಎಂ.ಎಚ್. ಕೃಷ್ಣಯ್ಯ, ಕನ್ನಡ ವಿಭಾಗ, ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು-560002
- ಹರಿಹರಪ್ರಿಯ, 165, 14ನೇ ಕ್ರಾಸ್, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560 010.
- ಕುಂ. ವೀರಭದ್ರಪ್ಪ, ಜಿಲ್ಲಾ ಪರಿಷತ್ ಪ್ರೌಢಶಾಲೆ, ಗೂಳ್ಯಂ, ಕರ್ನೂಲ-ಜಿಲ್ಲೆ
- ಶಿವರಾಮು ಕಾಡನ ಕುಪ್ಪೆ, ಮುಖ್ಯಸ್ಥರು ಕನ್ನಡ ವಿಭಾಗ, ವಿದ್ಯಾವರ್ಧಕ ಕಾಲೇಜು, ಮೈಸೂರು–570021
- ಬಸವರಾಜ ಕಟ್ಟೀಮನಿ, ಮಲಾಮರಡಿ, ಸುಲದಾಳ–ಅಂಚೆ ಬೆಳಗಾಂ–ಜಿಲ್ಲೆ.
- ಡಾ॥ ಆರ್ಕೆ, ಎಂ.ಐ.ಜಿ. 118, ಹುಡ್ಕೊ ಮನೆಗಳು, ಮಣಿಪಾಲ–576119
- ಜಿ. ರಾಜಶೇಖರ, ಭಾರತೀಯ ಜೀವವಿಮಾ ನಿಗಮ ಪ್ರಾದೇಶಿಕ ಕಛೇರಿ, ಉಡುಪಿ-576101 (ದ.ಕ)
- ಚದುರಂಗ, 2823, 8ನೇ ಕ್ರಾಸ್, ವಿ.ವಿ. ಮೊಹಲ್ಲಾ, ಮೈಸೂರು–2.
- ಭಗವಾನ್, 10, ಹುಡ್ಕೊ ಮನೆಗಳು, ಕುವೆಂಪುನಗರ, ಮೈಸೂರು-570023
- ರಾ. ಲಕ್ಷ್ಮೀನಾರಾಯಣ, ರೀಡರ್ ಕನ್ನಡ ವಿಭಾಗ, ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಕೋಲಾರ
- ಬಸವರಾಜ ವಕ್ಕುಂದ, ಕನ್ನಡ ಉಪನ್ಯಾಸಕ, ಕ್ರೈಸ್ಟ್ ಕಾಲೇಜು, ಬೆಂಗಳೂರು–560029.
- ಸುಧಾಶರ್ಮ ಚವತ್ತಿ, ಚವತ್ತಿ–ಅಂಚೆ, ಯಲ್ಲಾಪುರ, (ಉ.ಕ.)
- ಕೊ.ಜಿ. ನವೀನ್‌ಕುಮಾರ್, c/o ಅಶೋಕ್‌ಕುಮಾರ್ ರಂಜಿರ, ಪ್ರಥಮ ಎಂ.ಎ. ಕನ್ನಡ ವಿಭಾಗ, ಜ್ಞಾನಭಾರತಿ, ಬೆಂಗಳೂರು–560056.

---

ಪ್ರಿಯ ಓದುಗರೆ,

ಈಗಾಗಲೇ ಹಲವು ಬಾರಿ ಪತ್ರಿಕೆಯಲ್ಲಿ ಚಂದಾ ಕಳುಹಿಸುವ ಬಗ್ಗೆ ಮತ್ತು ನವೀಕರಣದ ಬಗ್ಗೆ ಮನವಿ ಮಾಡಿಕೊಂಡರೂ ಪ್ರಯೋಜನವಾಗಿಲ್ಲ. ರೂ. 35/–ರ ಸಣ್ಣ ಪ್ರಮಾಣದ ಹಣ ಎಂ.ಓ. ಇಲ್ಲವೆ ಡಿ.ಡಿ. ಮೂಲಕ ಕಳುಹಿಸಲು ಸೋಮಾರಿತನವೇ ಕಾರಣವೆಂದು ಹಲವರು ಹೇಳುತ್ತಿದ್ದಾರೆ. ಅದಕ್ಕಾಗಿ ಅಂಥವರು ಮೂರು ವರ್ಷಗಳ ಚಂದಾ ಹಣ ರೂ. 100/- ಕಳುಹಿಸಿ. ಇಷ್ಟು ನಿಮ್ಮ ಹಣ ನಮಗೆ ಮರಳುಗಾಡಿನ ಓಯಸಿಸ್ಸು. ಒಂಟೆಯ ಡುಬ್ಬದ ನೀರು ಎಲ್ಲಿಯವರೆಗೆ ಕಾಪಾಡಲು ಸಾಧ್ಯ?

ಈ ಸಾರಿ ''ಬಂಡಾಯ : 10 ವರ್ಷ'' ಕುರಿತು ಪ್ರಶ್ನೋತ್ತರ ಪ್ರಕಟವಾಗಿದ್ದರಿಂದ ಪತ್ರಿಕೆ 15 ದಿನ ತಡವಾಗಿದೆ. ಅಲ್ಲದೆ ಒಟ್ಟು 68 ಪುಟಗಳನ್ನು ಕೊಡಲಾಗಿದೆ. ದಯವಿಟ್ಟು ಚಂದಾ ಕಳುಹಿಸಿ. —ಸಂಪಾದಕ

---

# ಬಂಡಾಯ ಚಳವಳಿ 10 ವರ್ಷಗಳ ನೆನಪು

ಹತ್ತು ವರ್ಷಗಳಲ್ಲಿ ಒಂದು ರೀತಿಯ ದೀರ್ಘ ಮತ್ತೊಂದು ರೀತಿಯಲ್ಲಿ ಪುಟ್ಟ ಹೆಜ್ಜೆ ಇಟ್ಟಿರುವ ಬಂಡಾಯ ಸಾಹಿತ್ಯ ಚಳವಳಿ ತನ್ನ ಆಳ, ಅಗಲಗಳ ವಿಸ್ತಾರವನ್ನು ಖಚಿತಪಡಿಸಿಕೊಳ್ಳುವ ಮಾರ್ಗದಲ್ಲಿದೆ.

ಜನಪರ ಆಶಯಗಳ ಬಂಡಾಯ ತಾತ್ವಿಕ ನೆಲೆಗಟ್ಟಿನಲ್ಲಿ ಹತ್ತು ವರ್ಷ ತುಂಬಿ ಕೊಂಡಿದ್ದರೂ ಇದೊಂದು ಸಾಂಕೇತಿಕ ಹಬ್ಬದ ಉತ್ಸವ ಅಷ್ಟೆ. ಪ್ರಗತಿಪರ ವಿಚಾರ ಗಳ ಮೂಸೆಯಲ್ಲಿ ಹತ್ತು ವರ್ಷ ಸಾಮಾಜಿಕ ಆರ್ಥಿಕ ಅಸಮಾನತೆ ತೊಡೆದು ಹಾಕಲು ಸಾಹಿತ್ಯಕ ಮತ್ತು ಸಾಹಿತ್ಯೇತರ ಚಟುವಟಿಕೆಯಲ್ಲಿ ತೊಡಗಿದ ಬಂಡಾಯ ಹಿರಿ-ಕಿರಿ ಬರಹಗಾರರ ಮುಕ್ತ ಚಿಂತನೆಯ ವೇದಿಕೆಯಾಗಿ ರೂಪುಗೊಂಡಿದೆ. ಎಲ್ಲಾ ಪ್ರಗತಿಪರ ಚಿಂತಕರನ್ನು ಒಂದೆಡೆ ಕಲೆ ಹಾಕುವಲ್ಲಿ ಈ ಸಂಘಟನೆ ಸೋತಿದ್ದರೂ ಕೆಲವೊಂದು ತತ್ವ, ನಿಯಮಗಳನ್ನು ಪಾಲಿಸಿಕೊಂಡು ಬಂದಿದೆ. ಕಾವ್ಯದಲ್ಲಿ ದ್ವಂದ್ವ, ಗೊಂದಲ; ಕತೆ-ಕಾದಂಬರಿಯಲ್ಲಿ ಮೌಢ್ಯತೆ, ಪುರೋಹಿತಷಾಹಿ ವಿಚಾರಗಳ ಪೋಷಣೆ ಮಾಡು ತ್ತಲೇ ಮೇಲ್ ನೋಟದಲ್ಲಿ ಪ್ರಗತಿ ಪರ ಅನ್ನಿಸಿಕೊಂಡ ಬರಹಗಾರರನ್ನು ಸಂಶಯ ದಿಂದ ನೋಡುವ "ದೃಷ್ಟಿ" ಈ ಸಂಘಟನೆಗಿದೆ ಅನ್ನುವುದು ಅಭಿಮಾನಪಡುವಂಥಾದ್ದು.

"ಕನ್ನಡ ಸಾಹಿತ್ಯ ಚರಿತ್ರೆಯ ಗತಿಯನ್ನು ಗಮನಿಸಿದವರಿಗೆ, ಅದರ ವಾಹಿನಿ ಯಲ್ಲಿ ಹಲವು ಬಣ್ಣಗಳ ಹೊಳೆಗಳು ಮಿಳಿತವಾಗಿರುವುದು ಕಂಡು ಬರುತ್ತದೆ. ಆಯಾ ಕಾಲ ಮಾನದ ಸಾಮಾಜಿಕ–ರಾಜಕೀಯ–ಆರ್ಥಿಕ ಸ್ಥಿತ್ಯಂತರಗಳಿಗೆ ಅನುಗುಣವಾಗಿ ಸಾಹಿತ್ಯವೂ ಬದಲಾದ ರೂಪ ರೇಷೆಗಳಲ್ಲಿ ಒಡಮೂಡಿದೆ. ಕನ್ನಡ ಸಾಹಿತ್ಯದಲ್ಲಿ ಒಂದು ಮಹತ್ವದ ಘಟ್ಟವಾಗಿ ಕಾಣಿಸಿಕೊಂಡಿರುವ ಬಂಡಾಯ ಸಾಹಿತ್ಯ ಚಳುವಳಿ ಸಾಹಿತ್ಯಕ್ಕೆ ತಾತ್ವಿಕ ನೆಲೆಯನ್ನು ಒದಗಿಸಿಕೊಳ್ಳುವ ಒಂದು ಗಂಭೀರ ಪ್ರಯತ್ನದ ಅಭಿವ್ಯಕ್ತಿ".* ಇಂಥ ಅಭಿವ್ಯಕ್ತಿ, ಕ್ರಿಯಾಶೀಲತೆಯನ್ನು ಜೀವಂತವಾಗಿಡುತ್ತ ಸದಾ ಬದಲಾವಣೆಗೆ ತುಡಿಯುವಂಥಾದ್ದು. ಈ ತುಡಿತದ ಹಿಂದಿನ ಮನಸ್ಸು ಸಾಹಿತ್ಯ

---

ಸೃಷ್ಟಿ-ಸಂಪಾದಕನ ಟಿಪ್ಪಣಿಗಳು

*ಆರ್. ಪೂರ್ಣಿಮಾ, "ಸುಧಾ" ದಿ. 8, ಅಕ್ಟೋಬರ್. 1989, ಪುಟ—24

ನಿರ್ಮಿತಿ (ಕಲಾಕೃತಿ)ಯಲ್ಲಿರಬಹುದು; ಸಾಹಿತ್ಯೇತರ ವಿಚಾರ ಒಳಗೊಂಡಿರಬಹುದು. ಒಟ್ಟಿನಲ್ಲಿ ಅದೊಂದು ಮನೋಧರ್ಮವಾಗಿರಬೇಕು.

ಬಂಡಾಯ ಎಂಬುದು ಒಂದು ಮನೋಧರ್ಮ-ಎಂದು ಈಗಾಗಲೇ ಸ್ಪಷ್ಟಪಡಿಸಿರುವುದರಿಂದ "ಬಂಡಾಯ" ಅಂದರೆ ಯಾರೂ ಮೂಗು ಮುರಿಯಬೇಕಿಲ್ಲ. ಬಂಡಾಯವನ್ನು ತೆರೆದ ಕಣ್ಣುಗಳಿಂದ ನೋಡುವ ಮನಸ್ಸುಗಳು ಬೇಕು. ಮುಖ್ಯವಾಗಿ ಇಲ್ಲಿನ ಸಾಹಿತ್ಯವನ್ನು ಅಭ್ಯಾಸಿಸುವ ಹೃದಯಗಳು ಬೇಕು. ಬಂಡಾಯದವರು ಕೂಡ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಓದಿ, ಚರ್ಚಿಸಬೇಕು. ಸಾಹಿತ್ಯ ಚರಿತ್ರೆಯ ಸ್ಪಷ್ಟ ಅರಿವು ಇವರಿಗೆ ಇರಲೇಬೇಕು. ಇಲ್ಲವಾದರೆ ಪೂರ್ವಾಗ್ರಹ ಪೀಡಿತ ವಿಚಾರಗಳೇ ಎಲ್ಲೆಲ್ಲೂ ಮೆರೆಯುವ ಅಪಾಯವಿದೆ. ಎಲ್ಲಾ ವರ್ಗದಲ್ಲೂ–ಅದು, ಬರಹಗಾರನಾಗಿರಬಹುದು, ಕಾರ್ಮಿಕ–ರೈತ ನೌಕರ, ಕೂಲಿಕಾರ ಯಾರೇ ಆಗಿದ್ದರೂ ಅವರಲ್ಲಿ ಬಂಡಾಯ ಮನೋಧರ್ಮ ಇದ್ದೇ ಇರುತ್ತದೆಯೆಂಬ ಸರಳ ಸತ್ಯ ಅರಿತರೆ "ಬಂಡಾಯ"ವನ್ನು "ಮಡಿವಂತಿಕೆಯ ಮುಸುಕು" ಹಾಕಿ ನೋಡಬೇಕಿಲ್ಲ.

* * * *

ಬಂಡಾಯ ಸಾಹಿತ್ಯ ಚಳವಳಿಯ ಹತ್ತು ವರ್ಷಗಳ ಸಂದರ್ಭಕ್ಕೆ ಬೆಂಗಳೂರಿನಲ್ಲೊಂದು ಸಮಾವೇಶ (ದಿ.8.10.89 ಭಾನುವಾರ) ಜರುಗಿತು. 1979ರ ಮಾರ್ಚ್‌ನಲ್ಲಿ ಪ್ರಥಮ ಸಮ್ಮೇಳನ ಇಲ್ಲೇ ನಡೆಯಿತು. ಅಲ್ಲಿಂದ ಸಾಹಿತ್ಯ–ಸಾಂಸ್ಕೃತಿಕ ವಿಚಾರಗಳಲ್ಲಿ ಸಾಕಷ್ಟು ಬದಲಾವಣೆ ಆಗಿದೆ. ಮುಖ್ಯವಾಗಿ ಸಾಹಿತ್ಯ ಕ್ಷೇತ್ರದಲ್ಲಂತೂ ಹೊಸ ವಿಚಾರಗಳು ಹುಟ್ಟಿಕೊಳ್ಳತೊಡಗಿವೆ. ಸಂಪ್ರದಾಯಿಕ ವಿಚಾರಗಳನ್ನು ಬದಿಗೊತ್ತಿ ಪ್ರಗತಿಪರ ವಿಚಾರಗಳನ್ನು ರೂಢಿಸಿಕೊಳ್ಳುವಂಥಾ ಮನಸ್ಸುಗಳು, ಚಿಗುರ ತೊಡಗಿವೆ. ಈ ಚಿಗುರುವಿಕೆ ಆಗಬೇಕಾದಷ್ಟು ಪ್ರಮಾಣದಲ್ಲಿ ಆಗಿಲ್ಲದಿದ್ದರೂ ಆಗಿರುವ ಬದಲಾವಣೆ ಕಡಿಮೆಯದ್ದೇನಲ್ಲ.

* * * *

ನಾನು ಈ ಹತ್ತು ವರ್ಷಗಳಲ್ಲಿ ಬಂಡಾಯದ ಜೊತೆಗೆ ಬೆಳೆದವನು. ಒಂದು ಸಾಹಿತ್ಯಕ ಚಳವಳಿಯೊಂದಿಗೆ ಬೆಳೆಯುವುದು ನನ್ನಂಥವನಿಗೆ ಹೆಮ್ಮೆಯ ಸಂಗತಿಯಾಗಿದೆ. ಪ್ರಥಮ ಸಮ್ಮೇಳನಕ್ಕೆ ಮೈಸೂರಿನ ಕೆಲವು ಸಾಹಿತ್ಯ ಮಿತ್ರರು ಬಂದಿದ್ದಾಗ ನಾನು ಅವರೊಂದಿಗೆ ಬಂದು ಕುತೂಹಲದಿಂದ ಇಡೀ ಸಮಾರಂಭ ಗಮನಿಸಿದ್ದೆ* ಅಲ್ಲಿನ ಹೊಸ ವಿಚಾರಗಳು ನನ್ನಂಥವನಿಗೆ ಬದಲಾವಣೆ ಮಾರ್ಗ ಹುಡುಕಿಕೊಟ್ಟವು.

*ಆಗ ಬಂದಿದ್ದ ಒಬ್ಬರೇ ಒಬ್ಬರೂ ಕೂಡ ಹತ್ತು ವರುಷಗಳ ಸಮಾವೇಶದಲ್ಲಿ ಕಾಣಿಸಿಕೊಳ್ಳದೆ ಇರುವುದು ಮೈಸೂರಿನಲ್ಲಿ ಬಂಡಾಯ ಸಂಘಟನೆ ಸತ್ತಿರುವ ಸ್ಪಷ್ಟ ಸೂಚನೆ ಇರಬಹುದೇ ಎಂಬ ಗುಮಾನಿ ನನ್ನಲ್ಲಿದೆ.

ಸಮಾರಂಭದಲ್ಲಿ ಮಾತಾಡಿದ, ಹಾಡಿದ ಎಲ್ಲರ ಬಗ್ಗೆಯೂ ಒಂದು ರೀತಿ ಅಭಿಮಾನ ವಿತ್ತು. ಹಿಂಜರಿಕೆಯಿಂದಲೇ ಒಂದಿಬ್ಬರನ್ನು ಮಾತಾಡಿಸಿ ಪುಲಕಿತನಾಗಿದ್ದೆ.

ಮುಂದೆ ಇಂಥವರ ನಡುವೆ ಆಲೋಚಿಸುತ್ತಲೇ ಬಂಡಾಯ ಸಂಘಟನೆಯಲ್ಲಿ ಆಗಬೇಕಾದ ಕೆಲಸಗಳ ಕುರಿತು ವೈಯಕ್ತಿಕವಾಗಿ ಮತ್ತು 'ಅನ್ವೇಷಣೆ'ಯಲ್ಲಿ ಚರ್ಚಿಸಿದೆ. ಇಂಥ ಚರ್ಚೆಯ ವಿಚಾರಗಳನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಸಂದರ್ಭವಿದ್ದರೂ ಎಲ್ಲೋ ಸಂಘಟನೆಯ "ಊನ"ದಿಂದ ಅದ್ಯಾವುದೂ ಲೆಕ್ಕಕ್ಕೆ ಬಾರದೆ, ಬದಲಾಗದೆ ಯಥಾಸ್ಥಿತಿ-ಮುಂದುವರೆದು ಸಂಘಟನೆಯಿಂದ ಯಾವುದೋ ಕಾರಣಕ್ಕೆ ಹೊರ ಹೋದವರು ಒಳ ಬಂದು, ಒಳಗಿದ್ದವರು ಮೌನವಾಗಿ "ಬಂಡಾಯ ವೆಂಬ ಮನೋಧರ್ಮ"ವನ್ನು ಕೆಲವರಲ್ಲಾದರೂ ಅಂಕುಲಾರ್ಪಣ ಮಾಡಿದ್ದು ಈ ಚಳವಳಿಯ ಹೆಗ್ಗಳಿಕೆಯೆನ್ನಬಹುದು.

ಭಾವನಾತ್ಮಕ ಸಂಬಂಧ ಹೊಂದಿದ ಹತ್ತು ವರ್ಷಗಳ ಬೆಂಗಳೂರು ಸಮಾವೇಶ ಹಳೆಯ ಗೆಳೆಯರನ್ನು (ಮುಖ್ಯವಾಗಿ ದ.ಕ. ಮೈಸೂರು) ಕರೆಸಿ ಆತ್ಮ ವಿಮರ್ಶೆ ಮಾಡಿಕೊಳ್ಳಬೇಕಿತ್ತು. ಹಾಗೇ ಬಂಡಾಯದಿಂದ ಹೊರಗಿರುವ ಗಂಭೀರ ಚಿಂತಕರ ಅನಿಸಿಕೆಗಳನ್ನು (ಸಾಹಿತ್ಯ-ಸಾಂಸ್ಕೃತಿಕ ಬದಲಾವಣೆ ಗುರ್ತಿಸಿದಂಥವರ) ಸಮಾರಂಭ ದಲ್ಲಿ ಕೇಳಿ, ಚರ್ಚೆಗೊಳಪಡಿಸಬಹುದಿತ್ತು. ಕೊಂಚ ಆತುರದಲ್ಲಿ ಸಮಾವೇಶ ನಡೆದಂತಿದ್ದರೂ ಒಟ್ಟು ಹತ್ತು ವರ್ಷಗಳ ಬದಲಾದ ವಿಚಾರಗಳ ಮೆಲುಕು ಆ ದಿನ ಆಗಿದ್ದು ಮಾತ್ರ ಮರೆಯಲಾಗದು.

**ಬಂಡಾಯ ಹತ್ತಕ್ಕೆ ಪ್ರಶ್ನೋತ್ತರ :**

ಈ ಸಂದರ್ಭಕ್ಕೆ 'ಅನ್ವೇಷಣೆ' ಬಂಡಾಯ ಸಂಘಟನೆಯಲ್ಲಿರುವ ಮತ್ತು ಹೊರಗಿದ್ದು ಈ ಚಳವಳಿ ಗಮನಿಸಿರುವ ಇಪ್ಪತ್ತು ಬರಹಗಾರರಿಗೆ ಕೆಲವು ಪ್ರಶ್ನೆ ಗಳಿನ್ನು ಕಳುಹಿಸಿ ಉತ್ತರ ಬಯಸಿತ್ತು. ಈ ಸಂಚಿಕೆಯಲ್ಲಿ ಮೊದಲ ಕಂತಿನ ಉತ್ತರ ಗಳು ಪ್ರಕಟವಾಗಿವೆ. ಮುಂದಿನ ಸಂಚಿಕೆಯಲ್ಲಿ 2ನೇ ಕಂತು ಪ್ರಕಟವಾಗುತ್ತದೆ, ಹತ್ತು ವರ್ಷಗಳ ಜೀವಂತವಾಗಿರುವ ಸಂಘಟನೆಯನ್ನು ಇಲ್ಲಿ ಉತ್ತರಿಸಿರುವವರು ಗಮನಿಸಿದ ರೀತಿ ಇದಾಗಿದೆ. ವಿಚಾರಗಳ ತಾತ್ವಿಕ ಭಿನ್ನಾಭಿಪ್ರಾಯವಿದ್ದರೆ ಚರ್ಚೆಗೆ ಅವಕಾಶವಿದೆ. ಈ ಪ್ರಶ್ನೋತ್ತರ ಮಾಲಿಕೆಯನ್ನು ಮುಂದೆ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗುವುದು. ಇದೊಂದು ಬಂಡಾಯದ ಹತ್ತು ವರ್ಷಗಳ ಏರಿಳಿತಗಳ Document.

ದಿ. 22.10.1989 —ಆರ್.ಜಿ. ಹಳ್ಳಿ ನಾಗರಾಜ್
ಬೆಂಗಳೂರು–560 040 ಸಂಪಾದಕ

ಮುಖಾಮುಖಿ :

# ಪೂರ್ಣಚಂದ್ರ ತೇಜಸ್ವಿಯವರೊಡನೆ ಕೆಲ ನಿಮಿಷ

—ಕೊ.ಜಿ. ನವೀನ್‌ಕುಮಾರ್

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಹಲವು ಕಾರಣಕ್ಕೆ ಕನ್ನಡದ ಅತ್ಯುತ್ತಮ ಕಥೆಗಾರರು. ಪ್ರಕೃತಿಯ ಸೌಂದರ್ಯ ಮತ್ತು ನಿಗೂಢತೆಯ ಬಗ್ಗೆ ಈ ಕತೆಗಾರರಿಗಿರುವ ಅರಿವು, ಕಾವ್ಯಮಯ ಹಾಸ್ಯ ಪ್ರಜ್ಞೆ, ಸಂದರ್ಭದ ಪೂರ್ಣ ಅರ್ಥವಂತಿಕೆಯನ್ನು ಅರಿಯಬಲ್ಲ ಎಚ್ಚರ ಮತ್ತು ಕಥೆ ಹೇಳುವ ನಿರರ್ಗಳ ಹಾಗೂ ಹೊಚ್ಚ ಹೊಸ ವಿಧಾನ-ಇವೆಲ್ಲಾ ತೇಜಸ್ವಿಯವರ ವೈಶಿಷ್ಟ್ಯ. ಈಚೆಗೆ ತೇಜಸ್ವಿ ಅವರೊಂದಿಗೆ ನಡೆಸಿದ ಮಾತುಕತೆ ವಿವರ ಇಲ್ಲಿದೆ :

**O ನಿಮ್ಮ ಸಾಹಿತ್ಯಾಸಕ್ತಿಗೆ ಕಾರಣವಾದ ಕೆಲವು ಅಂಶಗಳನ್ನು ತಿಳಿಸ್ತೀರಾ?**

ನನ್ನ ಸಾಹಿತ್ಯಾಸಕ್ತಿಗೆ ಮುಖ್ಯ ಕಾರಣ ಅಂದರೆ, ನನಗೆ ಭಾಷೆಯಲ್ಲಿ ಕಲಾಕೃತಿಗಳನ್ನು ರಚಿಸುವ ಶಕ್ತಿ ಇದ್ದುದು. ಇದರೊಡನೆ ಚಿಕ್ಕಂದಿನಿಂದಲೂ ಸಾಹಿತ್ಯಿಕ ವಾತಾವರಣದಲ್ಲಿದ್ದುದೂ ಕಾರಣವಾಗಿದೆ.

**O ನೀವು ರಚಿಸಿರುವ ಕಾದಂಬರಿಗಳಾದ "ಚಿದಂಬರ ರಹಸ್ಯ" "ಕರ್ವಾಲೊ" ಗಳಲ್ಲಿ ಹೆಚ್ಚು ವಾಸ್ತವತೆ ಇದೆ ಅನ್ನುತ್ತೆ, ಈ ಬಗ್ಗೆ ನಿಮ್ಮ ಅಭಿಪ್ರಾಯ ವೇನು?**

ಈ ಎರಡು ಕಾದಂಬರಿಗಳೂ ವಾಸ್ತವದ ಘಟನೆಗಳಂತೆಯೇ ನಿಮಗೆ ತೋರುವುದಕ್ಕೆ ಕಾರಣ ಅವು ಸಮಕಾಲೀನ, ವರ್ತಮಾನದ ಪರಿಸ್ಥಿತಿಯನ್ನು ವಿವರಗಳೊಂದಿಗೆ ನೇರವಾಗಿ ಪ್ರತಿಬಿಂಬಿಸುವುದರಿಂದ ಒಂದು ಅರ್ಥದಲ್ಲಿ ಕಾಲ್ಪನಿಕ ಇನ್ನೊಂದು ಅರ್ಥದಲ್ಲಿ ವಾಸ್ತವ; ಆದರೆ ಒಂದು ಕಥೆಯ ವಸ್ತು ಕಾಲ್ಪನಿಕವೋ ವಾಸ್ತವವೋ ಮುಖ್ಯವಲ್ಲ.

**O ಸಾಹಿತ್ಯ ಸೃಷ್ಟಿಯಲ್ಲಿ ಇತ್ತೀಚೆಗೆ ತಾವು ಪ್ರಕೃತಿಯಲ್ಲಿನ ಸೂಕ್ಷ್ಮ ಅವಲೋಕನಕ್ಕೆ ತೊಡಗಿದ್ದೀರಿ ಹೌದೆ ?**

ಹೌದು : ಇದಕ್ಕೆ ಮುಖ್ಯ ಕಾರಣ, ಇಡೀ ಜಾಗತಿಕ ಮಟ್ಟದಲ್ಲಿಯೇ ಆಗುತ್ತಿರುವ ಮಹಾ ಪರಿವರ್ತನೆ. ಕೈಗಾರಿಕೀಕರಣ ಎಂಥ ಪರಿಸರ ಮಾಲಿನ್ಯದ ಸಮಸ್ಯೆಯನ್ನು ತಂದೊಡ್ಡಿದೆ ಎಂದರೆ "ಇಡೀ ಜಗತ್ತಿನ ನಾಗರೀಕತೆಯೇ ನಾವು ನಡೆಯುತ್ತಿರುವ ಅಭಿವೃದ್ಧಿ ಪಥ ಸರಿಯಾದುದೇ ಎಂದು ಪುನರಾಲೋಚಿಸುವಂತಾಗಿದೆ. ಮಾನವ ಇಡೀ ಜಗತ್ತಿನ ಜೀವಜಾಲದಿಂದ ಹೊರತಾದವನಲ್ಲ ಇವುಗಳ ಅರಿವಿನ ಸಂಬಂಧಗಳನ್ನು ತಿಳಿಯದೇ ನಾವು ಮುನ್ನಡೆದರೆ ಅವುಗಳ

ನಾಶದೊಂದಿಗೆ ನಾವೂ ನಿರ್ನಾಮವಾಗುತ್ತೇವೆ" ಎನ್ನುವ ಕ್ರಾಂತಿಕಾರಿ ತಿಳುವಳಿಕೆ ಜಗತ್ತಿನ ಎಲ್ಲೆಡೆಯಲ್ಲಿ ಪ್ರಾರಂಭವಾಗಿದೆ. ಜನಸಂಖ್ಯಾ ಹೆಚ್ಚಳ ದಿಂದ ಅಪಾಯದಲ್ಲಿ ಮುನ್ನಡೆಯುತ್ತಿರುವ ಭಾರತದಲ್ಲಿಯೂ ಈ ಬಗ್ಗೆ ಜಾಗೃತಿ ಆರಂಭವಾಗಿದೆ. ಇವುಗಳೆಲ್ಲದರ ಪರಿಣಾಮವಾಗಿಯೇ ನನ್ನ ಸಾಹಿತ್ಯ ದಲ್ಲಿಯೂ ಈ ಪ್ರಜ್ಞೆ ಪ್ರಧಾನವಾಗಿ ಕಾಣತೊಡಗಿದೆ.

**O ಸಾಹಿತ್ಯದ ಮೇಲೆ ಜಾತಿ ಪ್ರಭಾವದ ಬಗ್ಗೆ ಏನು ಹೇಳ್ತೀರಾ ?**

ಸಾಹಿತ್ಯದ ಮೇಲೆ ಜಾತಿ ಪದ್ಧತಿಯ ಪ್ರಭಾವ ಅತ್ಯಂತ ಕ್ಲಿಷ್ಟವೂ ವ್ಯಾಪಕವೂ ಆದುದಾಗಿದೆ. ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಪಂಪನಿಂದ ಇಂದಿನ ವರವಿಗೆ ವೈದಿಕ ಧರ್ಮದ ಜಾತಿ ಪದ್ಧತಿ ಮತ್ತು ಮೇಲು ಕೀಳುಗಳ ವಿರುದ್ಧ ನಡೆಸಿದ ಹೋರಾಟದ ಚರಿತ್ರೆಯೇ ಕನ್ನಡ ಸಾಹಿತ್ಯದ ಚರಿತ್ರೆಯೂ ಆಗಿದೆ. ಬೌದ್ಧ, ಜೈನ, ವೀರಶೈವ ಪಂಥಗಳ ಮುಖಾಂತರ ವೈದಿಕ ಧರ್ಮದ ವಿರುದ್ಧ ದಂಗೆ ಎದ್ದ ಚಳವಳಿಯ ಒಂದು ಅಂಗವೇ ಕನ್ನಡ ಸಾಹಿತ್ಯ.

**O ನಿಮ್ಮ ಕಾದಂಬರಿಗಳಲ್ಲಿ ಆಧ್ಯಾತ್ಮಕ್ಕಿಂತ ವೈಜ್ಞಾನಿಕತೆಗೆ ಹೆಚ್ಚಾಗಿ ಪ್ರಾಮುಖ್ಯತೆ ಕೊಟ್ಟಿದ್ದೀರಿ ಕಾರಣವೇನಿರಬಹುದು ?**

ನನ್ನ ಕಾದಂಬರಿಗಳಲ್ಲಿ ಆಧ್ಯಾತ್ಮಿಕ, ಧಾರ್ಮಿಕ, ಅಂಶಗಳನ್ನು ತ್ಯಜಿಸಿ ಆದಷ್ಟು ವೈಜ್ಞಾನಿಕ ಅಂಶಗಳಿಗೆ ಪ್ರಾಧ್ಯಾನ್ಯತೆ ಕೊಡಲು ಪ್ರಯತ್ನಿಸಿದ್ದೇನೆ. ಇದಕ್ಕೆ ಹಿಂದೂ ಧರ್ಮದ ಭೀಕರ ಸ್ವರೂಪ ಕಾರಣ, ಇದನ್ನ 'ರಿಪೇರಿ' ಮಾಡುವ, ಸುಧಾರಣೆ ಮಾಡುವ ಎಲ್ಲಾ ಮನುಷ್ಯರ ಪ್ರಯತ್ನಗಳೂ ಮಣ್ಣುಪಾಲಾಗಿ ಇವತ್ತಿಗೂ ಮತಾಂಧರ, ಮೂಢರ, ದುರಾಚಾರಿಗಳ ಹಿಡಿತದಲ್ಲಿಯೇ ಹಿಂದೂ ಧರ್ಮದ ಬಾವುಟ ಇದೆ. ಹಿಂದೂ ಧರ್ಮದ ಯಾವುದೇ ಆವೃತಿಯನ್ನು ನಾವು ಪ್ರತಿಪಾದಿಸಿದರೂ ಅದು ಕೊನೆ ಕೊನೆಗೆ ಪ್ರತ್ಯಕ್ಷವಾಗಿಯೋ, ಪರೋಕ್ಷ ವಾಗಿಯೋ, ಜಾತಿ ಪದ್ಧತಿ, ಅಸ್ಪೃಶ್ಯತೆ, ಅಸಮಾನತೆ, ಸ್ತ್ರೀಯರ ಪ್ರತ್ಯೇಕತೆ ಗಳನ್ನು ಪ್ರತಿಪಾದಿಸುತ್ತವೆ. ಇದಕ್ಕೆ ಒಂದೇ ದಾರಿ ಎಂದರೆ ಈ ಧರ್ಮವನ್ನೆ ದೂರ ಇಡುವುದು.

**O ನೀವು "ಕರ್ವಾಲೋ" ಕಾದಂಬರಿಯಲ್ಲಿ ಬರೆದ ನಿಗೂಢ ಹಾರುವ ಓತಿ ಬಗ್ಗೆ ಅನೇಕ ಟೀಕೆಗಳು ಈಗ ಪತ್ರಿಕೆಯಲ್ಲಿ ಅಚ್ಚಾಗುತ್ತಿವೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?**

ಹಾರುವ ಓತಿಯನ್ನು ನಾನು ಊಹಿಸಿ ಬರೆದಿಲ್ಲ. ಅದನ್ನು ಸ್ವತಃ ನಾನೇ ನೋಡಿದ್ದೇನೆ. ಹಿಡಿಯಲು ಪ್ರಯತ್ನಿಸಿದಾಗ ಸಿಗಲಿಲ್ಲ. ಈಗ ಅದು

ಬದಲಾಗಿದೆ ನಿಜ, ಆದರೆ ನಾನು ನೋಡಿ ಚಿತ್ರಿಸಿದಷ್ಟು ಅಮೂಲ್ಯವಾದುದು ಅವರಿಗೆ ಸಿಕ್ಕಿಲ್ಲ, ಇದು ನಾಶವಾಗುತ್ತಿರುವ ಸಂತತಿ. ಇನ್ನು ಕೆಲವೇ ವರ್ಷಗಳಲ್ಲಿ ಅದು ನಾಶವಾಗಲೂಬಹುದು.

**O ನವೋದಯದ ಸಾಹಿತಿಗಳಾದ ಕುವೆಂಪು ಅವರ ಮಗನಾಗಿ ಉದ್ದೇಶಪೂರ್ವಕವಾಗಿ ಎಲ್ಲಾ ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ಬರೆದಿರೋ? ಅಥವಾ ಅವರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಕಾದಂಬರಿ ಪ್ರಕಾರಕ್ಕೆ ನಿಮ್ಮನ್ನು ಸೀಮಿತಗೊಳಿಸಿಕೊಂಡಿರೋ ?**

O ನವೋದಯ ಸಾಹಿತ್ಯ ಸಂದರ್ಭದಲ್ಲಿ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳೂ ಹೆಚ್ಚು ಕಡಿಮೆ ಖಾಲಿ ಬಿದ್ದುದರಿಂದ ಆಗ ಬಂದ ಉದ್ಧಾಮ ಸಾಹಿತಿಗಳೆಲ್ಲರೂ ಎಲ್ಲ ಪ್ರಕಾರಗಳಲ್ಲೂ ಕೆಲಸ ಮಾಡಿದರು. ಕನ್ನಡ ಸಾಹಿತ್ಯದಲ್ಲಿ ಎಲ್ಲಾ ರೀತಿ ಸಾಹಿತ್ಯ ರಚನೆಯೂ ಸಾಧ್ಯವೆಂದು ತೋರಿಸುವ ಸವಾಲು ಮತ್ತು ಅನಿವಾರ್ಯತೆ ಅವರಿಗೆ ಇತ್ತು. ಈಗ ಸ್ಥಿತಿ ಬದಲಾಗಿದೆ. ನಮ್ಮ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಸ್ವಾಭಾವಿಕವಾದ ಸಾಹಿತ್ಯ ಕೃಷಿಯನ್ನು ನಾವು ಆರಂಭಿಸುವ ಸೌಲಭ್ಯ ನಮಗಿದೆ.

**O ಸಾಹಿತಿಗಳಿಗೆ ಸರ್ಕಾರ ಕೊಡುತ್ತಿರುವ ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ನಿಮ್ಮ ಅನಿಸಿಕೆ ಏನು ?**

ಸಾಹಿತ್ಯಕ್ಕು ಸಾಹಿತಿಗಳಿಗೂ ಸರ್ಕಾರವೇ ಆಗಲಿ ಇತರ "ಸ್ವಾಯತ್ತ" ಸಂಸ್ಥೆಗಳೇ ಆಗಲಿ ಕೊಡುತ್ತಿರುವ ಪ್ರಶಸ್ತಿ ಇತ್ಯಾದಿ ರೂಪದ ಧನಸಹಾಯ ಏನೇನೂ ಸಾಲದು. ಸಾಹಿತ್ಯ ರಚನೆಯಿಂದಲೇ ಬದುಕಲು ಸಾಧ್ಯ ಎನ್ನುವ ಪರಿಸ್ಥಿತಿಯನ್ನು ಕನ್ನಡ ಸಾಹಿತ್ಯದಲ್ಲಿ ಉಂಟು ಮಾಡಿದರೆ ಕನ್ನಡದ ಅತ್ಯುತ್ತಮ ಯುವ ಪ್ರತಿಭೆಗಳನ್ನು ಕನ್ನಡ ಸಾಹಿತ್ಯಕ್ಕೆ ಆಕರ್ಷಿಸಬಹುದು. ಜೊತೆಗೆ ಕನ್ನಡದ ಪ್ರತಿಭಾಂತ ಸಾಹಿತಿಗಳು ಚೈತನ್ಯ ಪೂರ್ಣವಾಗಿ ಬರೆಯುವಾಗಲೇ ಆತನಿಗೆ ಧನಸಹಾಯ ಮಾಡಿ ಪ್ರೋತ್ಸಾಹಿಸಿದರೆ ಆತನಿಂದ ಹೆಚ್ಚು ಸೃಷ್ಟಿ ಸಾಧ್ಯ. ಅದು ಬಿಟ್ಟು ಮುದಿಯಾಗಿ ಹೋದಮೇಲೆ ಅವನಿಗೆ ಪ್ರಶಸ್ತಿ ಕೊಟ್ಟು ಶಾಲು ಹೊದ್ದಿಸಿ ವೃದ್ಧಾಪ್ಯ ವೇತನ ಕೊಡುವುದು ಮಾನವೀಯ ದೃಷ್ಟಿಯಿಂದ ಒಳ್ಳೆಯದೇನೋ ಸರಿ. ಆದರೆ ಸಾಹಿತ್ಯ ಸೃಷ್ಟಿಯ ದೃಷ್ಟಿಯಿಂದ ಹೆಚ್ಚು ಲಾಭಕರವಲ್ಲ. ಜೊತೆಗೆ ಈ ಪ್ರಶಸ್ತಿಗಳಿಗೆ ಕೊಡುವ ಮೊತ್ತವೂ ತೀರಾ ಕಡಿಮೆ.

ಒಳ್ಳೆಯ ಸನ್ನಡತೆ, ಪ್ರಾಮಾಣಿಕತೆ, ಸರ್ವ ಸಮಾನ ಭಾವ, ಜಾತೀಯತೆಯ ಮೌಢ್ಯದ ವಿರುದ್ಧ ಯೋಚಿಸುವುದು, ವೈಜ್ಞಾನಿಕ ಚಿಂತನೆ ಮುಂತಾದವುಗಳು ನನ್ನ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿರುವುದಕ್ಕೆ ನನ್ನ ತಂದೆಯೇ ಕಾರಣ ಎಂದು ಹೇಳುವ ತೇಜಸ್ವಿ ಕುವೆಂಪುರವರ ಮಗನಾಗಿ ಆ ಸಾಹಿತ್ಯ ಪರಂಪರೆಯನ್ನು ಉಳಿಸಿಕೊಂಡು ಹೋಗುತ್ತಾರೆಂಬ ವಿಷಯದಲ್ಲಿ ಎರಡು ಮಾತಿಲ್ಲ.

# ತೇಜಸ್ವಿ ಸಾಹಿತ್ಯ ಮತ್ತು ಕಲೆ

—ಪ್ರೊ|| ಎಂ. ಎಚ್. ಕೃಷ್ಣಯ್ಯ

೧

ಪೂರ್ಣಚಂದ್ರ ತೇಜಸ್ವಿಯವರ ಸಾಹಿತ್ಯವನ್ನು ಕುರಿತು ಅಧ್ಯಯನ, ಪರಿಶೀಲನೆ ನಡೆಸುವ ಸಂದರ್ಭದಲ್ಲಿ 'ತೇಜಸ್ವಿ ಸಾಹಿತ್ಯ ಮತ್ತು ಕಲೆ' ಶೀರ್ಷಿಕೆಯನ್ನು ತಪ್ಪಾಗಿ ಗ್ರಹಿಸುವ ಸಂಭವ ಉಂಟು. ಇಲ್ಲಿ 'ಕಲೆ' ಎಂದಾಗ, ಅವರ ಸಾಹಿತ್ಯದಲ್ಲಿ ಕಲೆಗೆ ಸಂಬಂಧಿಸಿದ ಅಂಶಗಳ ಬಗ್ಗೆ ಗಮನ ಸೆಳೆಯುವ ಉದ್ದೇಶವಲ್ಲ ಅಥವಾ ಲಲಿತ ಕಲೆಗಳ ಚಿತ್ರಣ ಕುರಿತ ಪರಿಶೀಲನೆಯೂ ಅಲ್ಲ.

ಇಲ್ಲಿ 'ಕಲೆ' ಶಬ್ದವನ್ನು ವಿಶೇಷ ಸಂದರ್ಭದಲ್ಲಿ ಬಳಸಲಾಗಿದೆ.

ಕಲೆ ಎಂಬುದಕ್ಕೆ ಕೌಶಲ್ಯ ಎಂಬರ್ಥವೂ ರೂಢಿಯಲ್ಲಿದೆ. 'ಕುಶಲಕಲೆ' ಎನ್ನುವಲ್ಲಿ ಈ ಅರ್ಥ ಸ್ಪಷ್ಟ. ಆದರೆ ಕೌಶಲ್ಯವಷ್ಟೇ ಕಲೆಯಲ್ಲ. ಕ್ರಾಫ್ಟ್ ಅನ್ನು ಯಾರಾದರೂ ಅಭ್ಯಾಸದಿಂದ ಕಲಿಯಬಹುದು. ಅದು ಅನುಕರಣ ಸಾಧ್ಯ. ಆದ್ದರಿಂದ ಕೇವಲ 'ತಂತ್ರ'ದ ಅನುಕರಣೆಯೇ 'ಕಲೆ'ಯ ಉದ್ದೇಶವಲ್ಲ. ಆದರ ಅಂತಃಸತ್ವವಲ್ಲ.

ಒಂದು ರಚನೆಯನ್ನು, ಒಂದು ಕಲಾಕೃತಿಯನ್ನು ಮೆಚ್ಚಿ ಚೆನ್ನಾಗಿದೆ ಎಂದ ಮೇಲೂ, "ಅದು ಸರಿ, ಆದರೆ ಅದು ಕಲಾತ್ಮಕವಾಗಿದೆಯೆ, 'ಕಲೆ' ಆಗಿದೆಯೇ ?" ಎಂಬ ಪ್ರಶ್ನೆ ಕೇಳುವುದುಂಟು. ಈ ಪ್ರಶ್ನೆ ಹೆಚ್ಚು ಮಹತ್ವದ್ದು ಎನಿಸುತ್ತದೆ. ರಚನೆ ಮತ್ತು ಕಲಾತ್ಮಕತೆ ಶಬ್ದಗಳು ರಚನೆಯ ಹಂತದ ಕ್ರಿಯೆಯನ್ನು, ಸೃಜನ ಶೀಲತೆಯ ಪ್ರಕ್ರಿಯೆಯನ್ನು ಕುರಿತಾದುವು.

ಆ ಕಾರಣ, ಒಬ್ಬ ವ್ಯಕ್ತಿಯು ಕಲಾಕೃತಿಗಳಿಗೆ ಅನ್ವಯಿಸಿ ಹೇಳುವಾಗ, ವಸ್ತು ಅಥವಾ ವಿಷಯಕ್ಕೂ, ಆತ ಆರಿಸಿಕೊಳ್ಳುವ ಮಾಧ್ಯಮ ಹಾಗೂ ಅಭಿವ್ಯಕ್ತಿಯ ವಿಧಾನಕ್ಕೂ ಇರುವ ಸಂಬಂಧವನ್ನು ಕಲೆ ಅಥವಾ ಕಲಾತ್ಮಕತೆ ಶಬ್ದ ಸೂಚಿಸುತ್ತದೆ. ಎಂದರೆ, ವಸ್ತು ಮತ್ತು ಅಭಿವ್ಯಕ್ತಿ ವಿಧಾನ ಅವಿಭಾಜ್ಯ ಸಹಜ ಕ್ರಿಯೆ ಎಂದು ನನ್ನ ಅನಿಸಿಕೆ. ಈ ಸಂಬಂಧ ಎಷ್ಟು ಸಹಜವೋ ಗಾಢವೂ ಆ ಕೃತಿ, ಆ ರಚನೆ ಅಷ್ಟು ಕಲಾತ್ಮಕವಾಗುತ್ತದೆ. ಇದು ಕೇವಲ ಕಥೆ, ಕವನ, ಕಾದಂಬರಿ, ನಾಟಕ, ಮಹಾಕಾವ್ಯ ಮುಂತಾದ ಸಾಹಿತ್ಯ 'ಪ್ರಕಾರ'ಗಳ ಸಂಬಂಧಕ್ಕೆ ಸೀಮಿತವಾದದ್ದಲ್ಲ. ಅದನ್ನೂ ಮೀರಿದ, ಮಾಧ್ಯಮದ ಸತ್ವಗಳನ್ನು ಬಳಸಿಕೊಳ್ಳುವಲ್ಲೂ, ಅಭಿವ್ಯಕ್ತಿಯ ಸಾಧ್ಯತೆ

ಗಳನ್ನು ರೂಪಿಸುವಲ್ಲಿಯೂ ಕಂಡು ಬರುತ್ತದೆ. ಚಿತ್ರಕಲೆಯ ಮಾಧ್ಯಮ ಬಣ್ಣ. ಶಿಲ್ಪದ ಮಾಧ್ಯಮ ಮಣ್ಣು, ಮರ, ಶಿಲೆ ಇತ್ಯಾದಿ. ಸಾಹಿತ್ಯದ ಮಾಧ್ಯಮ ಭಾಷೆ. ಆಯಾ ಮಾಧ್ಯಮಗಳ ವಿಶಿಷ್ಟಗುಣ ಮೌಲ್ಯಗಳ ಮೂಲಕ ಅನುಭವ ಚಿಂತನೆಗಳು ತಳೆಯುವ 'ರೂಪ' ಕಲೆಯೆನ್ನಿಸಿಕೊಳ್ಳುತ್ತದೆ.

ಆದ್ದರಿಂದ ಒಂದು ಸಾಹಿತ್ಯ ಕೃತಿಯನ್ನು ಕಲೆಯ ದೃಷ್ಟಿಯಿಂದ ಪರಿಶೀಲಿಸುವುದು ಎಂದಾಗ ಅವರ ಅಂತಃಸತ್ವ, ಚಿಂತನೆ, ಆಂತರಿಕ ಉದ್ದೇಶಗಳು ಅಭಿವ್ಯಕ್ತಿ ಕ್ರಿಯೆಯಲ್ಲಿ ಪಡೆಯುವ ರೂಪ ಅಥವಾ ಅಭಿವ್ಯಕ್ತಿ ಸ್ವರೂಪ ಎಂಬರ್ಥದಲ್ಲಿ ಸ್ವೀಕರಿಸಬೇಕಾಗುತ್ತದೆ. ಭಾಷೆ, ಶೈಲಿ, ತಂತ್ರ ವಿಧಾನಗಳಿಗೂ ವಸ್ತುವಿಗೂ ಇರುವ ಆಂತರಿಕ ಸಂಬಂಧಗಳ ಮೌಲ್ಯವನ್ನು ರೂಪ ಅಥವಾ ಫಾರಂ ಎಂಬ ವಿಶಾಲಾರ್ಥದಲ್ಲಿ ಪರಿಶೀಲಿಸಬೇಕಾಗುತ್ತದೆ.

ಇನ್ನೊಂದು ಪ್ರಶ್ನೆ. ಸ್ವತಃ ತೇಜಸ್ವಿಯವರೇ ಸ್ಪಷ್ಟವಾಗಿ ಹೊಸಮಾರ್ಗ ಹಿಡಿಯುವ ಬಗ್ಗೆ ಹೇಳಿದ್ದಾರೆ. ಹಾಗಿದ್ದರೆ ವಸ್ತು ಚಿಂತನೆಗೂ ತಂತ್ರ ವಿಧಾನಕ್ಕೂ ಸಹಜ ಸಂಬಂಧ ಹೇಗಾಗುತ್ತದೆ ? ತಂತ್ರ ಹೊರಗಿನಿಂದ ಆರೋಪಿಸಬಹುದಾದ್ದು ಎಂದರ್ಥವಾಗುವುದು ಸಹಜ. ತೇಜಸ್ವಿಯವರು ತಂತ್ರದ ಸಾಧ್ಯತೆಗಳನ್ನಷ್ಟೆ ಅನ್ವೇಷಿಸಿಲ್ಲ. ಅವರ ಮೂಲ ನಿಲುವಿನಲ್ಲೇ, ಚಿಂತನೆಯಲ್ಲೇ ಹೊಸನಿಟ್ಟಿನ ಸೂಚನೆ ಮೊದಲು ಕಾಣಿಸಿಕೊಳ್ಳುತ್ತದೆ :

"ಈ ನವೀನ ಮನ್ವಂತರದ ಪ್ರತಿನಿಧಿಗಳಲ್ಲೋರ್ವನಾಗಿ ನಾನು ನನ್ನ ಜೀವನದ ಅರ್ಥವನ್ನು, ತತ್ತ್ವವನ್ನು ಮತ್ತೊಮ್ಮೆ ಹೋರಾಡಿ ಗಳಿಸಿಕೊಳ್ಳಬೇಕಾಗಿದೆ, ಪುನರನುಭವಿಸಬೇಕಾಗಿದೆ. ಪುನರ್ನಿರ್ಮಾಣ ಮಾಡಬೇಕಾಗಿದೆ ಅಥವಾ ಹೊಸತೊಂದನ್ನು ಸೃಜಿಸಬೇಕಾಗಿದೆ". ಜೀವನದ ಅರ್ಥ, ತತ್ವ, ಅನುಭವಗಳು, ಅಮೂರ್ತ ಸಂವೇದನೆಗಳು ಯಾವ ರೂಪ ತಳೆಯುವುದರಿಂದ ಹೆಚ್ಚು ಅರ್ಥಪೂರ್ಣ, ಸಹಜ , ಕಲಾತ್ಮಕ ಆಗಬಲ್ಲುದು ಎಂಬಲ್ಲಿಯೇ ಈ ವಸ್ತುರೂಪ ಸಂಬಂಧ ಅಡಗಿದೆ. ಅದು ಪ್ರಜ್ಞಾಪೂರ್ವಸ್ಥಿತಿಯ ಸಂಬಂಧವೂ ಆಗಬಹುದು. ಅಥವಾ ಪ್ರಜ್ಞಾ ಪೂರ್ವಕವಾದ ಅಂದರೆ ಅಮೂರ್ತ ಸಂವೇದನೆ, ಅನುಭವಗಳು ಸ್ಪಷ್ಟವಾಗುತ್ತಿವೆ. ತೇಜಸ್ವಿಯವರು ಇಂದು ಮುಟ್ಟಿರುವ ನೆಲೆಯನ್ನು ಗುರುತಿಸುವಲ್ಲಿ ಇದು ಮಹತ್ವದ್ದು ಎನಿಸಿದೆ.

೨

ಇದಕ್ಕೊಂದು ದೃಷ್ಟಾಂತ : ಪಾಲ್ ಕ್ಲೀ ತನ್ನ ಅಮೂರ್ತಕಲೆಯ ರಚನಾ ವಿಧಾನವನ್ನು ಕುರಿತು ಹೇಳಿದ್ದಾನೆ. ಅವನಲ್ಲಿ ವಸ್ತು ಮತ್ತು ತಂತ್ರ ವಿಧಾನದ

ಸಂಬಂಧಗಳು ಸೃಜನ ಕ್ರಿಯೆಯ ಸಂದರ್ಭದಲ್ಲಿ ಆಕಸ್ಮಿಕವೂ ಬೌದ್ಧಿಕವೂ ನಿರ್ಧರಿಸ ಬಹುದು. ಮೊದಲೇ ಒಂದು ವಿಷಯ ಸ್ಪಷ್ಟ ಪಡಿಸಬೇಕಿದೆ. ಪಾಲ್ ಕ್ಲೀಗೂ ತೇಜಸ್ವಿಯವರಿಗೂ ಯಾವುದೇ ಬಗೆಯ ಪ್ರೇರಣೆ, ಸ್ಫೂರ್ತಿ, ಪ್ರಭಾವಗಳ ಸಂಬಂಧ ವಿಲ್ಲ. ಒಬ್ಬನದು ವರ್ಣ–ರೂಪಗಳ ಅಮೂರ್ತ ಕಲಾಪ್ರಪಂಚ; ಇವರದು ಏಕ ಕಾಲಕ್ಕೆ ಮೂರ್ತಾಮೂರ್ತ ಸಂವೇದನೆಗಳನ್ನು ಅಭಿವ್ಯಕ್ತಿಸುವ ಭಾಷಾ ಮಾಧ್ಯಮದ ಸಾಹಿತ್ಯ ಪ್ರಪಂಚ. ಆದರೆ ಇಬ್ಬರ ದೃಷ್ಟಿ ಹಾಗೂ ರಚನಾ ವಿಧಾನಗಳಲ್ಲಿ ಕಾಣ ಬರುವ ಎರಡು ಬಗೆಯ ಸಾಮ್ಯಕಾರಣವಾಗಿ ಮಾತ್ರ ಈ ಉದಾಹರಣೆ ಅಷ್ಟೆ.

ಪಾಲ್ ಕ್ಲೀ ಯ ಅಮೂರ್ತಲೋಕ ನಿಗೂಢವಾದದ್ದು, ವಿಸ್ಮಯಕಾರಿ ಯಾದದ್ದು. ಆತನ ಚಿತ್ರಗಳಲ್ಲಿ ಮೊಸಾಯಿಕ್ ರಚನಾ ವಿನ್ಯಾಸವನ್ನು ಕಾಣಬಹುದು. ನಮಗೆ ಪರಿಚಿತವಾದ ಜ್ಯಾಮಿತೀಯ ನಿಖರ ರೂಪಗಳಿಗಿಂತ ಭಿನ್ನವಾದ ರೂಪ ಗಳಿಂದ ಕೂಡಿದೆ. ಪಾರದರ್ಶಕ ಬಣ್ಣ; ಚಲನೆ–ಚೈತನ್ಯ ಹರಿಯುವಂತೆ ಇರುತ್ತವೆ. ಕಲಾವಿದನ ಪೂರ್ವಾನುಭವಗಳ ವಾಸನೆಗೆ ಸಂಬಂಧಿಸಿದಂತೆ ಕಾಣುತ್ತವೆ. ಆದರೂ ಈ ವಿವಿಕ್ತ ಆಕಾರಗಳು, ಬಣ್ಣಗಳು ಕಾಣದ ಕೈಯ ಪ್ರಭಾವದಿಂದ ಪರಸ್ಪರ ಹೊಂದಿ ಕೊಂಡು ನಮ್ಮದೇ ಆದ ಲಯ ಹಾಗೂ ಸಾಂಗತ್ಯವನ್ನು ಕೋರತೊಡಗುತ್ತವೆ. ಪಾಲ್ ಕ್ಲೀ ಮೂರು ಅಂಶಗಳನ್ನು ತನ್ನ ಸಿದ್ಧಾಂತಕ್ಕೆ ಆಧಾರವಾಗಿಟ್ಟುಕೊಂಡಿದ್ದಾನೆ. ರೇಖೆ, ಛಾಯೆ, ಬಣ್ಣಗಳೇ ಆ ಮೂರು ಅಂಶಗಳು. ಎಲ್ಲ ಚಿತ್ರಕಾರರಿಗೂ ಇವೇ ಆಧಾರ. ಆದರೆ ವ್ಯತ್ಯಾಸವಿರುವುದು ಆತ ಇವುಗಳಿಗೆ ನೀಡುವ ಅವುಗಳಿಗೇ ವಿಶಿಷ್ಟ ವಾದ ಆಂತರಿಕ ಗುಣಮೌಲ್ಯಗಳಲ್ಲಿ. ಈ ಮೌಲ್ಯಗಳನ್ನು ಆ ಕಾರಣವೇ ಆಯಾಮ ಗಳು ಎನ್ನುತ್ತಾನೆ. ನಮಗೆ ರೂಢಿಯಾಗಿರುವ 'ವಾಸ್ತವಿಕ' ದೃಷ್ಟಿಯಿಂದ ಇವುಗಳನ್ನು ಬಳಸುವುದಿಲ್ಲ. ಅವುಗಳ ಆಂತರಿಕ ಸ್ವಯಂಮೌಲ್ಯ, ಒಡನಾಟ, ಸಾಪೇಕ್ಷ ಸಂಬಂಧಗಳನ್ನು ಅನುಲಕ್ಷಿಸಿ ರಚನೆಗೆ ತೊಡಗುತ್ತಾನೆ. ಅಂತರಂಗದ ಅಗತ್ಯಕ್ಕೆ ತಕ್ಕಂತೆ ನಿರ್ಮಾಣ, ಮೊಸಾಯಿಕನಂತೆ ಸಂಯೋಜನೆ, ಮುಕ್ತಾಯದ ಘಟ್ಟದಲ್ಲಿ ಅಲ್ಲೊಂದು ಗೆರೆ, ಇಲ್ಲಿಷ್ಟು ಬಣ್ಣ ಸೇರಿಸಿದಾಗ ಕೆಲವೊಮ್ಮೆ ಗುರುತಿಸ ಬಹುದಾದ ವಸ್ತುಗಳು. ಅವನಿಗೆ ಈ ವಾಸ್ತವ ಪ್ರಪಂಚದ ವಸ್ತುಗಳೇ ಗುರಿಯಲ್ಲ. ವಾಸ್ತವ ಲೋಕಕ್ಕಿಂತ ಭಿನ್ನವಾದ, ವಿಶ್ವದ ನಿಗೂಢತೆಯ ಅನ್ವೇಷಣೆಯಲ್ಲಿನ ಅನುಭವಗಳ ಆಕಾರಗಳ ಬಣ್ಣಗಳ ಪ್ರಪಂಚ ಅದು. ಅದರ ಮೌಲ್ಯಗಳೂ ತಮ್ಮದೇ ರೀತಿಯಲ್ಲಿ ವಾಸ್ತವವಾದುವು. ಕಂಡಷ್ಟೇ ಸತ್ಯವಲ್ಲ, ಈ ಬ್ರಹ್ಮಾಂಡದಲ್ಲಿ ತಾರೆ ನೀಹಾರಿಕೆಗಳಲ್ಲಿ ಏನೆಲ್ಲ ರೂಪಗಳಿವೆಯೋ ಆಕಾರಗಳಿವೆಯೋ ವರ್ಣಸಂವೇದನೆ ಗಳಿವೆಯೊ ಯಾರು ಬಲ್ಲರು?

ಪಾಲ್ ಕ್ಲೀ ದೃಗ್ಗೋಚರ ಜಗತ್ತಿನ ವಾಸ್ತವತೆಯನ್ನು ನಿರಾಕರಿಸಿ, ಅದನ್ನು ಆಧರಿಸಿಯೋ, ಹೇರಿಯೋ ಕಲ್ಪಿಸಿಯೋ ಇನ್ನೊಂದು ಬಗೆಯ ಮೌಲ್ಯಗಳನ್ನು ತನ್ನ ರಚನೆಗಳಲ್ಲಿ ವ್ಯಕ್ತಪಡಿಸುತ್ತಾನೆ. ಆಂತರಿಕ ಮೌಲ್ಯಗಳ ಆಧಾರದಿಂದ ಮೂಡಿ ಬರುವ ಮೊಸಾಯಿಕ್ ಸಾಂಗತ್ಯ ಮತ್ತು ನಿಗೂಢತೆಯ ಅನ್ವೇಷಣೆ-ಈ ಎರಡು ವಿಷಯಗಳಲ್ಲಿ ಪಾಲ್ ಕ್ಲೀ ಮತ್ತು ತೇಜಸ್ವಿಯವರಲ್ಲಿ ನಮಗೆ ಸಾಮ್ಯ ಕಂಡು ಬರುತ್ತದೆ.

'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನದ 'ಹೊಸ ದಿಗಂತದ ಕಡೆಗೆ' ಎಂಬ ಪೀಠಿಕೆಯಲ್ಲಿ ತೇಜಸ್ವಿ ಹೀಗೆ ಹೇಳಿದ್ದಾರೆ :

"ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾದೃಷ್ಟಿ, ಕಾರಂತರ ಜೀವನ ದೃಷ್ಟಿ ಮತ್ತು ಬದುಕಿನಲ್ಲಿನ ಪ್ರಯೋಗಶೀಲತೆ-ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮಗಳನ್ನುಂಟುಮಾಡಿರುವಂಥವು........"

"ನನ್ನ ಜೀವನ ವಿಧಾನವನ್ನು, ಗ್ರಹಿಸುವ ಕ್ರಮವನ್ನು ಆಲೋಚನೆಯನ್ನು ಅಭಿವ್ಯಕ್ತಿ ವಿಧಾನವನ್ನು, ಒಟ್ಟಿನಲ್ಲಿ ಇಡೀ ಸಮಗ್ರ ವ್ಯಕ್ತಿತ್ವವನ್ನು ಸಂಪೂರ್ಣ ಬದಲಿಸಿ ಹಾಕಿದ್ದು ಲೋಹಿಯಾರವರ ತತ್ವಚಿಂತನೆ...".

"ಕನ್ನಡದ ನವ್ಯ ಸಂಪ್ರದಾಯವನ್ನು ಸಂಪೂರ್ಣವಾಗಿ ತೊರೆದು ಹೊಸ ದಿಕ್ಕಿನಲ್ಲಿ ನಾವೀಕ ಅನ್ವೇಷಿಸಬೇಕಾಗಿದೆ"

ಹೊಸ ಅನ್ವೇಷಣೆಗೆ ಅವರು ಕೊಡುವ ಕಾರಣಗಳು ಕೇವಲ ಸಾಹಿತ್ಯ ರಚನಾ ತಂತ್ರ ವಿಧಾನಗಳಿಗೆ ಮಾತ್ರ ಸೀಮಿತವಾಗದೆ ಆಳಕ್ಕೆ ಇಳಿಯುತ್ತದೆ ಎಂಬುದು ಸ್ಪಷ್ಟ. "ಈ ನಿಗೂಢವಾದ ಅಪರಚಿತ ಭಾರತದ ಬಗ್ಗೆ ಕಣ್ಣು ತೆರೆಸಿದ್ದು ಲೋಹಿಯಾ. ನಮ್ಮ ನವ್ಯಸಾಹಿತ್ಯ ಸಂಪ್ರದಾಯ ಸಾಂಕೇತಿಕ ಮಾರ್ಗ, ತರ್ಕದ ಪ್ರೌಢ ವಿಮರ್ಶೆ ಇವೆಲ್ಲಾ ಅವ್ಯಕ್ತ ಭಾರತದ ಎದುರು ಅಸಂಬದ್ಧವಾಗಿ ಹೋದವು. ಆದರೆ ಇದರೊಡನೇ ಲೋಹಿಯಾರ ತತ್ವಚಿಂತನೆ ಮತ್ತು ಹಳ್ಳಿಯ ಜೀವನದ ಹೊಸ ಪರಿಸ್ಥಿತಿಗಳು ನನಗೆ ಇನ್ನೊಂದು ಬಗೆಯ ಶ್ರದ್ಧೆಯನ್ನು ಕೊಟ್ಟವು. ಇಟಾಲಿಯನ್ ಫ್ರೆಂಚ್ ಸಾಹಿತ್ಯಗಳಷ್ಟೇ ಒರಿಜಿನಲ್ಲಾದ ಜೀವನಾನುಭವ ತಿಳುವಳಿಕೆಗಳಿಂದ ಅಚ್ಚ ಭಾರತೀಯ ಸಾಹಿತ್ಯ ಸೃಷ್ಟಿ ಸಾಧ್ಯ ಎಂದು. ನನ್ನ ಜೀವನ ಮತ್ತು ಅದರ ಅಂಗವಾದ ಸಾಹಿತ್ಯ ಸೃಷ್ಟಿ ಇವು ಇಂದಿನ ಭಾರತೀಯ ಸಂದರ್ಭದ ನಮ್ಮ ವ್ಯಕ್ತಿತ್ವದ ಅಸಂಬದ್ಧತೆಯ ವಿರುದ್ಧ ಹೋರಾಡುವ ಮತ್ತು ಹೊಸ ಪರಿಪೂರ್ಣ ನಾಗರೀಕತೆಯೊಂದನ್ನು ನಿರ್ಮಿಸುವ ಹೋರಾಟವೆಂದರೆ ಮಾತ್ರ ನಾವು ನವ್ಯರಿಂದ ಭಿನ್ನವೆಂದು ಭಾವಿಸಬೇಕು".

ತೇಜಸ್ವಿ ತಮ್ಮ ಹಿಂದಿನ ಜಾಡನ್ನು ಬಿಟ್ಟು "ಸರಳವಾಗಿ, ನೇರವಾಗಿ ನೋಡುವ ಕೇವಲ ದೃಷ್ಟಿಕೋನ ಮಾತ್ರವಾಗಿ ಸಾಹಿತಿ ಕತೆಗಳಲ್ಲಿ ವ್ಯಕ್ತವಾಗುವ ಹೊಸದೊಂದು ಶಿಸ್ತನ್ನು ಬರವಣಿಗೆಯಲ್ಲಿ ನಾನು ಅಭ್ಯಾಸ ಮಾಡಬೇಕಾಯ್ತು" ಎನ್ನುತ್ತಾರೆ. ಇದು 'ಸ್ವರೂಪ' ಕಿರು ಕಾದಂಬರಿಯಿಂದ ಪ್ರಾರಂಭವಾಯ್ತು. ಸ್ವರೂಪದ ನಂತರದ ರಚನೆಗಳನ್ನು ನೋಡುವ ಮೊದಲು ನವ್ಯದ ಕಾಲದಲ್ಲಿ ಅವರೇ ಬರೆದ ಕಥೆಯೊಂದರ ಉದಾಹರಣೆ ನೀಡಿ ವ್ಯತ್ಯಾಸವನ್ನು ಗುರುತಿಸಬಹುದು.

'ಹುಲಿಯೂರಿನ ಸರಹದ್ದು' ಕಥಾಸಂಕಲನದಲ್ಲಿನ 'ಊರ್ವಶಿ' ಕಥೆ ಶಾಪ, ವಿರಹ, ಮಿಲನ ಎಂಬ ಮೂರು ಭಾಗಗಳಲ್ಲಿ ನಿರೂಪಿತವಾಗಿದೆ. ಸೋಮುವಿಗೆ ಸುಭದ್ರೆಯಲ್ಲುಂಟಾದ ಕಾಮ-ಪ್ರೇಮದ ಹುಚ್ಚು ಸೆಳೆತ ಇಲ್ಲಿಯ ವಸ್ತು. ಸೋಮು ವಿಗೆ ನಾಯಿ ಕಡಿದದ್ದು, ಅದು ಹುಚ್ಚೋ ಅಲ್ಲವೋ ಎಂದು ತಿಳಿಯಲು ಅದು ಸತ್ತಿತೋ ಬದುಕಿದೆಯೋ ಎಂದು ಹುಡುಕುವುದು, ತಿಂಗಳ ನಂತರ ಅದನ್ನು ಕಂಡಾಗ ಹುಚ್ಚು ಹಿಡಿಯುವ ಭೀತಿ ಇಳಿದದ್ದು ಇಲ್ಲಿ ಪ್ರಧಾನವಾಗಿ ನಿರೂಪಿತವಾಗಿದೆ. ನಡು ನಡುವೆ ಸುಭದ್ರೆಯ ಬಗೆಗಿನ ಅನಿಸಿಕೆಗಳು ಬಂದು, ಜೊತೆಗೆ ಗುಡುಗು ಸಿಡಿಲುಗಳ ವರ್ಣನೆಯೂ ಕೂಡಿ ಸಂಕೇತಗಳು ಸಮಾನಾಂತರವಾಗಿಯೇ ಸಾಗುತ್ತವೆ. ನಾಯಿ ಕಂಡಾಗ, ಸಧ್ಯ ಹುಚ್ಚು ನಾಯಿಯಲ್ಲ ಅನಿಸುವುದು, ಅದುವರೆಗಿನ gathering clouds ಗುಡುಗು ಮಿಂಚು ಸಿಡಿಲು ಮಳೆಯಾಗಿ ಸುರಿಯುವುದು—ಸೋಮುವಿಗೆ ಹಿಡಿದಿದ್ದ ಪ್ರೇಮದ ಭರ ಇಳಿಯುವುದರಲ್ಲಿ ಮುಕ್ತಾಯವಾದರೂ ಈ ಮೂರು ವಿವಿಕ್ತವಾಗಿ ನಿಲ್ಲುತ್ತವೆಯೇ ಹೊರತು, ವಾತಾವರಣ ಸೃಷ್ಟಿಯ ಪರಿಣಾಮ ಹೊರತು, ಸಂಕೇತಗಳು ಸಹಜ ಸಂಬಂಧ ಪಡೆಯುವುದಿಲ್ಲ. ಸಹಜವಾದ ಬೆಳವಣಿಗೆಯ ಪರಿಣಾಮ ತೋರುವುದಿಲ್ಲ.

ಒಂದು ಅನುಭವ, ಒಂದು ಚಿಂತನೆ, ಒಂದು ಸಂವೇದನೆಯನ್ನು ಮುಟ್ಟಿಸಲು ಸಂಕೇತ,ಪ್ರತಿಮೆಗಳ ಬಳಕೆ ದೂಷಣೆಯೆಂದೇನೂ ಅಲ್ಲ; ಅನಂತಮೂರ್ತಿ, ಸದಾಶಿವ, ರಾಘವ, ರಾಮಚಂದ್ರ ಶರ್ಮ ಮೊದಲಾದವರ ಕಥೆಗಳಲ್ಲಿ ಸಂಕೇತ ವಿಧಾನ ಶಕ್ತಿಯುತವಾಗೇ ಬಳಕೆಯಾಗಿದೆ. 'ನಲ್ಲಿಯಲ್ಲಿ ನೀರು ಬಂತು' ಎಂಬ ಕಥೆಯಲ್ಲಿ ಕಲಾತ್ಮಕತೆಯ ಉನ್ನತ ಮಟ್ಟವನ್ನು ಗುರುತಿಸಬಹುದು. ಅಲ್ಲದೆ, ಈ ವಿಧಾನ ನವ್ಯರ ಸ್ವತ್ತೂ ಅಲ್ಲ. ಬೇರೆ ಬೇರೆ ಕಾಲಗಳಲ್ಲಿ ಸಾಂಕೇತಿಕ ವಿಧಾನವನ್ನು ಬಗೆ ಬಗೆಯಾಗಿ ಬಳಸಿಕೊಂಡಿರುವುದನ್ನೂ ಕಾಣಬಹುದು. ಕುವೆಂಪು ಅವರ 'ಕಾನೂರು ಹೆಗ್ಗಡತಿ'ಯಲ್ಲಿ ಬರುವ ಬಲಿಹಿತದ ಪ್ರಸಂಗ, 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಯಲ್ಲಿ ಗುತ್ತಿ ಹೊಳೆಯ ಹುಚ್ಚು ನೆರೆ ಇಳಿಯಲು ಕಾಯುವ ಪ್ರಸಂಗ, ಕಾದಂಬರಿಯ ಕೊನೆಯಲ್ಲಿ ತಿಮ್ಮಿಯೊಡನೆ ಹೊಳೆದಾಟುವ ಗುತ್ತಿ ನಾಯಿಯನ್ನು ಪ್ರವಾಹದಲ್ಲಿ

ಕಳೆದುಕೊಂಡಾಗ, ನಾಯಿ ಗುತ್ತಿಯ identity ಯ ಸ್ಥಿತ್ಯಂತರದ ಸಂಕೇತ-ಇವೆಲ್ಲಾ ಸಂಕೇತಗಳನ್ನು ಕಾಣಬಹುದು. ಇವು ಪ್ರಜ್ಞಾಪೂರ್ವಕವಾಗಿ ಆದುವು ಎನಿಸುವುದಿಲ್ಲ. ಅಷ್ಟು ಸಹಜ. ಆದರೆ ನವ್ಯರು ಈ ಸಂಕೇತಗಳನ್ನು ಅತಿ ಮಾಡಿದ್ದು ಅವು ಯಾಂತ್ರಿಕವಾಗಲು, ಪರಿಣಾಮ ತೀವ್ರತೆಯನ್ನು ಕಳೆದುಕೊಳ್ಳಲು ಕಾರಣ ವಾಯಿತು. ಎಲ್ಲಿಂದಲೊ, ಯಾವ ಸಂದರ್ಭಕ್ಕೆ ಸಹಜವಾದುದೊ ಅದುದನ್ನು ಎಳೆ ತಂದು ತೆಕ್ಕೆಯಾಗುವಾಗ ಅವು ಸಮಾನಾಂತರವಾಗಿಯೇ ಉಳಿದುಬಿಡುತ್ತವೆ. ಗಿಡ ದಲ್ಲಿ ಸಾರ ಹೀರಿ ಅರಳಿದ ಹೂವಾಗುವುದಿಲ್ಲ—ಸೋಲಿಸುವುದಾದರೆ.

ತೇಜಸ್ವಿಯವರು ಹಿಡಿದ ಹಾದಿ ಇದಕ್ಕಿಂತ ಭಿನ್ನವಾದದ್ದು. ಒಂದು ವರ್ಣಿತ ವಸ್ತು ಅಥವಾ ಅನುಭವ ಮತ್ತು ಅದರ ಸಾಂಕೇತಿಕತೆ ಎರಡೂ ಒಂದೇ ಆಗಿ ಬಿಡು ತ್ತವೆ. parallel ಆಗಿ ನಿಲ್ಲುವುದಿಲ್ಲ. ಇಲ್ಲವೆ, ವಿವಿಕ್ತವಾದ ಅನುಭವಗಳು ಮೊಸಾಯಿಕ್‌ನಂತೆ ಜೋಡಣೆಯಾಗುತ್ತ, ತಮ್ಮ ಅಸ್ತಿತ್ವದ ಪ್ರಸ್ತುತತೆ ಹಾಗೂ ಅರ್ಥವಂತಿಕೆಯನ್ನು, ತಮ್ಮ ಆಂತರಿಕ ಮೌಲ್ಯವನ್ನು ಉಳಿಸಿಕೊಂಡು ಬೆಳೆದ ಸಮಗ್ರ ರೂಪದಲ್ಲಿ ಧ್ವನಿ ಸಾಂಕೇತಿಕತೆಯನ್ನು ಪಡೆಯುತ್ತವೆ.

ಈ ಕಾರಣವಾಗಿಯೇ, ಪಾಲ್ ಕ್ಲೀ ಪ್ರತಿಪಾದಿಸಿದ ರೇಖೆ, ಛಾಯೆ, ವರ್ಣ ಗಳ ಅಂತರಿಕ ಸ್ವಯಂ ಮೌಲ್ಯದಿಂದ ಕೂಡಿದ, ನಿಗೂಢ ಜಗತ್ತಿನ ಅನ್ವೇಷಣೆಯ ಮೊಸಾಯಿಕ ರಚನೆಗಳಾದ ಅತನ ಅಮೂರ್ತ ಕಲೆಗೂ ತೇಜಸ್ವಿಯವರ ರಚನೆಗಳಲ್ಲಿ ಕಾಣಬರುವ ಕಲೆಗೂ ಇರುವ ಸಾಮ್ಯ ಗಮನಾರ್ಹ. ಯಾವುದೇ ಮತ ಧರ್ಮ ತತ್ತ್ವಗಳೇ ಆಗಲಿ, ಸಾಮಾಜಿಕವಾಗಿ ಅರ್ಥಪೂರ್ಣವಾಗದಿದ್ದರೆ ಅದು ವಿಫಲ. ಹಾಗೇ ಯಾವುದೇ ಸಾಮಾಜಿಕ ಮೌಲ್ಯಗಳು ತಾತ್ವಿಕ ಆಯಾಮವನ್ನು ಪಡೆಯದಿದ್ದರೆ ಆಗಲೂ ಅವು ವಿಫಲವಾಗುತ್ತವೆ. ಇವು ತಮ್ಮಷ್ಟಕ್ಕೆ ತಾವು ಎಷ್ಟೇ ಆಕರ್ಷಕವಾಗಿ ಸಾಹಿತ್ಯದಲ್ಲಿ ಅಭಿವ್ಯಕ್ತಿ ಪಡೆದಿದ್ದರೂ ಅಂಥ ಸಾಹಿತ್ಯ ಶ್ರೇಷ್ಠವಾಗಲಾರದು ಎಂಬುದು ತೇಜಸ್ವಿಯವರ ನಿಲುವು. 'ಕರ್ವಾಲೋ' ಬಗ್ಗೆ ಬರೆಯುತ್ತ ಜಿ.ಎಚ್. ನಾಯಕ್ ಅವರು ಈ ನಿರ್ಧಾರಕ್ಕೆ ಬರುತ್ತಾರೆ: "ಅನುಭವ ಮತ್ತು ಅಭಿವ್ಯಕ್ತಿ ಎರಡಕ್ಕೂ ಸಂಬಂಧಿಸಿದಂತೆ ಹೊಸವ್ಯಾಪ್ತಿ ಮತ್ತು ಹೊಸ ಸಾಧ್ಯತೆಗಳನ್ನು ಸೃಜನ ಶೀಲ ಸಂದರ್ಭದಲ್ಲಿಯೇ ಕಂಡುಕೊಳ್ಳುವ ಪ್ರಾಮಾಣಿಕ ನಿಷ್ಠೆಯೇ ಅದಕ್ಕೆ ಕಾರಣ ವಾಗಿದೆ. ಆ ಎರಡೂ ಬಗೆಯ ಸೃಜನಶೀಲ ಪ್ರಯೋಗಗಳಲ್ಲಿಯೂ ತೇಜಸ್ವಿ ಯವರು ಪಡೆದ ಮಹತ್ವಪೂರ್ಣವಾದ ಕಲಾತ್ಮಕ ಯಶಸ್ಸೇ ನನ್ನ ಈ ಅಭಿಪ್ರಾಯ ವನ್ನು ಸಮರ್ಥಿಸುತ್ತದೆ."

ತೇಜಸ್ವಿಯವರ ಕರ್ವಾಲೊಗೆ ಹಿನ್ನುಡಿ ಬರೆಯುವ ಸಂದರ್ಭದಲ್ಲಿ ಅವರ ಸಾಹಿತ್ಯ ರಚನೆಯ ವಿಶ್ಲೇಷಣೆ ಮಾಡಿರುವ ಜಿ. ಎಚ್. ನಾಯಕ್ ಅವರು ಈ ಭಿನ್ನ ಮಾರ್ಗದ ವಿಶಿಷ್ಟ ಅಂಶಗಳನ್ನು ಗುರುತಿಸಿದ್ದಾರೆ. ಹಾಗೆ ನೋಡಿದರೆ, ತೇಜಸ್ವಿಯವರ ಕೃತಿಗಳ ಪರಿಶೀಲನೆಗೆ ಹೊಸಪರಿಭಾಷೆಯನ್ನೇ ನೀಡಿದ್ದಾರೆ ಎನ್ನಬಹುದು. ಪ್ರಾರಂಭದ ಭಾಗ ವಸ್ತು ಮತ್ತು ರೂಪ ಎರಡಕ್ಕೂ ಅನ್ವಯಿಸುವುದಾಗಿದೆ :

"ಪೂರ್ಣಚಂದ್ರ ತೇಜಸ್ವಿಯವರ 'ಯಮಳ ಪ್ರಶ್ನೆ' ನಾಟಕದಲ್ಲಿ ರಂಗದ ಮೇಲೆ ಸ್ಥಾಯಿಭಿತ್ತಿಯಾಗಿ ಬಿದ್ದಿರುವ 'ಶರೀರ' ವೊಂದು ಇದೆ. 'ಸ್ವರೂಪ'ದಲ್ಲಿ 'ಮೌನ' ಸ್ಥಾಯಿಭಿತ್ತಿಯಾಗಿದೆ. 'ನಿಗೂಢ ಮನುಷ್ಯರು' ಕೃತಿಯಲ್ಲಿ 'ನಿಗೂಢ' ಸ್ಥಾಯಿಭಿತ್ತಿಯಾಗಿದೆ. 'ಕರ್ವಾಲೊ'ದಲ್ಲಿ ಆರರ ಮುಂದೆ ಒಂಬತ್ತು ಸೊನ್ನೆ ಹಾಕಿದಾಗ ಆಗುವಷ್ಟು ವರ್ಷಗಳಿಗಿಂತ ಹಿಂದಿನದಿದ್ದಿರಬಹುದಾದ, ವಿಕಾಸಪಥದಲ್ಲಿ ಚಲನಶೀಲವಾಗದ 'ಹಾರುವ ಓತಿ' ಸ್ಥಾಯಿಭಿತ್ತಿಯಾಗಿದೆ.

ಈ ರೀತಿ ಸ್ಥಾಯಿಭಿತ್ತಿಯೊಂದು ಈ ಎಲ್ಲ ಕೃತಿಗಳಲ್ಲಿಯೂ ಬಂದಿರುವುದು ಕೇವಲ ಆಕಸ್ಮಿಕವೆಂದು ನನಗೆ ಅನಿಸುವುದಿಲ್ಲ. ಎಲ್ಲ ಕೃತಿಗಳಲ್ಲಿಯೂ ಆ ಸ್ಥಾಯಿಭಿತ್ತಿಯ ಸಮ್ಮುಖದಲ್ಲಿ ಚಲನಶೀಲವಾದ ಬದುಕಿನ ಕ್ರಿಯೆಗಳು ಹೊಸ ಅರ್ಥವಂತಿಕೆಯಲ್ಲಿ ಗೋಚರಿಸತೊಡಗುತ್ತವೆ. ಹಾಗೆಯೇ ಚಲನಶೀಲವಾದ ಬದುಕಿನ ಮುನ್ನೆಲೆಯಿಂದಾಗಿ ಆ ಸ್ಥಾಯಿಭಿತ್ತಿಗೆ ಹೊಸ ಅರ್ಥವಂತಿಕೆಯ ಆಯಾಮ ಪ್ರಾಪ್ತವಾಗುತ್ತದೆ. ಅಥವಾ ದತ್ತವಾಗುತ್ತದೆ. ಈ ಎರಡೂ ಹೊಸ ಅರ್ಥವಂತಿಕೆಗಳು, ಚಿರವಾಸ್ತವದ ಸಂಕೇತವಾದ ಆ : ಸ್ಥಾಯಿಭಿತ್ತಿಯ ಹಾಗೂ ಚರವಾಸ್ತವದ ಸಂಕೇತವಾದ ಆ ಚಲನಶೀಲ ಬದುಕಿನ ಮೂಲ ದ್ರವ್ಯಕ್ಕೆ—ಅವುಗಳ ಪ್ರತ್ಯೇಕ ಪ್ರತ್ಯೇಕ ಸ್ಥಿತಿಯಲ್ಲಿ ಇದ್ದಿರಬಹುದಾದ ಅಥವಾ ಇದ್ದಂತೆ ಕಾಣಿಸುವ ಮೂರ್ತ ಅರ್ಥದೊಂದಿಗೆ ಕರಗಿಕೊಂಡು ಅಂತಿಮವಾಗಿ ಅಮೂರ್ತ ಅಥವಾ ನಿಗೂಢ ಅರ್ಥಪರಂಪರೆಗಳನ್ನು ಅನುರಣಿಸುವಂತೆ ಮಾಡುವ ಹೊಂಚು ತೇಜಸ್ವಿಯವರ ಕೃತಿಗಳಲ್ಲಿ ಇದೆ, ಎಂಬುದು ನನ್ನ ತಿಳುವಳಿಕೆಯಾಗಿದೆ"

ಜಿ. ಎಚ್. ನಾಯಕ್ ಅವರು ಹೇಳುವ ಹಿನ್ನೆಲೆಯ ಸ್ಥಾಯಿಭಿತ್ತಿ, ಮುನ್ನೆಲೆಯ ಚಲನಶೀಲ ಬದುಕಿನ ಕ್ರಿಯೆಗಳು, ಚಿರವಾಸ್ತವ ಮತ್ತು ಚರವಾಸ್ತವ-ಇವು ಕಲೆಯಲ್ಲಿನ ಹಿನ್ನೆಲೆ-ಮುನ್ನೆಲೆ, ಜುಕ್ಸ್ಟಾಪೊಸಿಷನ್ ಹಾಗೂ ಮೊಜಾಯಿಕ್ ಸಂಯೋಜನೆಯಿಂದ 'ಆಳ'ದ-ಅಂದರೆ, ಅಗೋಚರ ನಿಗೂಢ ಆಳದ-ಇಣುಕು ನೋಟವನ್ನು ಪಾಲ್ ಕ್ಲೀ ನೀಡುವಂಥವೇ ಆಗಿವೆ.

'ಯಮಳಪ್ರಶ್ನೆ'ಯಲ್ಲಿ ಹಿನ್ನಲೆಯಲ್ಲಿ 'ಶರೀರ' ಬಿದ್ದಿದೆ. ರಮೇಶ, ಹೇಮಂತ ಮೋಟಾರು ಬೈಸಿಕಲ್ಲು ಕೆಟ್ಟು, ರಿಪೇರಿ ಮಾಡಲು ಪ್ರಯತ್ನಿಸುತ್ತಾರೆ. ದಾರಿ ಹೋಕರೂ ಕುತೂಹಲದಿಂದ ನೆರವಾಗಲು ಪ್ರಯತ್ನಿಸುತ್ತಾರೆ. ಪೋಲೀಸಿನವ ಹಿನ್ನೆಲೆಯ 'ಶರೀರ'ಕ್ಕೂ ಮುನ್ನೆಲೆಯ ಮೋಟಾರ್ ಬೈಸಿಕಲ್ಲು-ಜನಸಂದಣಿಗೂ ಸಂಬಂಧ ಕಲ್ಪಿಸಿ ರಮೇಶ, ಹೇಮಂತರ ಮೇಲೆ ಅಪಘಾತದ ಕೊಲೆ ಆರೋಪಣೆಗೆ ಸಿದ್ಧವಾಗುತ್ತಾನೆ. ಯುವತಿಯಿಂದ ಆ 'ಶರೀರ' ಬೆಳಗಿನಿಂದ ಬಿದ್ದಿದೆ ಎಂದು ತಿಳಿದಾಗ ಎಲ್ಲ ಸ್ಥಳ ಖಾಲಿಮಾಡಲು ಯತ್ನಿಸುತ್ತಾರೆ—ಪೋಲೀಸನೂ ಸೇರಿದಂತೆ. ಈ ಹಿನ್ನೆಲೆ-ಮುನ್ನೆಲೆಗೂ ಆಂತರಿಕ ಸಂಬಂಧದ ಸುಳಿವು ಕೊನೆಯಲ್ಲಿ ಹೇಮಂತನ ಮಾತುಗಳಲ್ಲಿ ಬರುತ್ತದೆ. "ಹಾಗಲ್ಲಾ, ರಮೇಶ, ಇದೊಂದು ಧರ್ಮಸೂಕ್ಷ್ಮ. ವಾದಕ್ಕೆ ಸಂಬಂಧಿಸಿದುದಲ್ಲ, ಆತ್ಮಕ್ಕೆ ಸಂಬಂಧಿಸಿದ್ದು. ನಾವು ನಾಲ್ಕು ಜನ ಕೈಕಾಲು ಗಟ್ಟಿಯಿದ್ದವರು ಸುತ್ತೂ ಇದ್ದೂ ಅವನು ಸತ್ತರೆ ನಾವು ಕೊಲೆಪಾತಕಿಗಳು ಏಕೆ ಅಲ್ಲ? ನನಗೆ ಗೊತ್ತಾಗುವುದಿಲ್ಲ. ಢಿಕ್ಕಿ ಹೊಡೆಸಿದರೆ ಮಾತ್ರ ಅಪರಾಧಿಗಳಾಗು ತ್ತಿದ್ದೆವು ಈಗ ಅಲ್ಲ ಎಂದು ಹೇಗೆ ಹೇಳುತ್ತೀ"?

ಮಾನವ ಸಮಾಜದ ಹೊರ ವಾಸ್ತವ ಘಟನೆಗಳಿಗೂ ಮೀರಿದ, ಸೃಷ್ಟಿಯಲ್ಲಿನ ಒಳಸಂಬಂಧಗಳ, ಕಾರಣ-ಕ್ರಿಯೆಗಳಲ್ಲಿನ ಹೊಸ ದೃಷ್ಟಿಯ ಮೌಲ್ಯ ಇಲ್ಲಿ ಪ್ರಶ್ನೆ ಯಾಗಿ ನಿಲ್ಲುತ್ತದೆ. ಇದು ಸಾಂಕೇತಿಕವಾದ ಅರ್ಥವಲ್ಲ. ಘಟನೆಗಳ ವಾಸ್ತವ ನಿರೂಪಣೆಯಿಂದಲೇ ರೂಪ ತಳೆಯುವಂಥದ್ದು.

'ಸ್ವರೂಪ'-ಕಥೆ ಅಥವಾ ಕಿರುಕಾದಂಬರಿಯ ತಂತ್ರ. ಕಥಾನಾಯಕ ಶ್ರೀನಿವಾಸ ಶಿಕಾರಿಗೆ ಹೋದಾಗ ಗೆಳೆಯ ಹೇಮಂತನಿಗೆ ತನ್ನ ಬದುಕನ್ನೆ ತೋಡಿ ಕೊಳ್ಳುವ ನಿರೂಪಣೆಯಾಗಿದೆ. ಕಥಾನಾಯಕನ ಕೇಂದ್ರಪ್ರಜ್ಞೆಯ ಸುತ್ತ ಹೆಣೆವ ನವ್ಯರ ಕಥನ ವಿಧಾನವಾಗುವುದಿಲ್ಲ. ನಾಯಕರು 'ಮೌನ' ಇಲ್ಲಿಯ ಸ್ಥಾಯಿಭಿತ್ತಿ ಎನ್ನುತ್ತಾರೆ. ಹಿನ್ನೆಲೆಯ ಮೌನ ಮುನ್ನೆಲೆಯ ಶ್ರೀನಿವಾಸನ ಮಾತುಗಳು ಜುಕ್ಸಾ ಪೋಸ್ ಆಗುತ್ತವೆ. ಮೌನ ಸ್ಥಾಯಿಯಾದರೆ, ನಿಶ್ಚಲವಾದರೆ, ಮಾತಿಗೆ ಚಲನ ಶೀಲ ಗುಣವಿದೆ, ಅದು ಫ್ಲೂಯಿಡ್, ಲಿಕ್ವಿಡ್ ಗುಣ ತರುತ್ತದೆ. ಶ್ರೀನಿವಾಸನ ನೆನಪುಗಳು, ಪೂರ್ವಕ್ರಿಯೆಗಳ ಪುನರ್‌ಪರಿಶೀಲನೆ ಪಕ್ಷ-ಪ್ರತಿಪಕ್ಷಗಳ ಸಂವಾದವನ್ನು, ಅಂಥ ವಾತಾವರಣವನ್ನು ನಿರ್ಮಿಸುತ್ತದೆ. ಶ್ರೀನಿವಾಸನ ಗಂಭೀರ ಆಲೋಚನೆ, ಕ್ಷುಲ್ಲಕವಾದುದನ್ನು ನಿರ್ಲಿಪ್ತವಾಗಿ ನಿರೂಪಿಸುವ ವಿಧಾನ ನವ್ಯರಿಂದ ಭಿನ್ನವಾದದ್ದು. ಸ್ವರೂಪದ ಮುನ್ನುಡಿಯಲ್ಲಿ ಶ್ರೀರಾಮ ಹೇಳುವಂತೆ ಶ್ರೀನಿವಾಸ "ತನ್ನ ಅಧಃಪತನ, ಅದಕ್ಕೆ ಹೇಗೆ ಇಡೀ ಮನುಷ್ಯ ಸಂಕುಲವೇ ಹೊಣೆ ಎನ್ನುವ ವಿರಾಟ್‌ವ್ಯಂಗ್ಯ. ಕೊಟ್ಟ ಕೊನೆಗೆ ಹೇಗೆ ಎಲ್ಲರ ಕರ್ಮಕ್ಕೆ ಎಲ್ಲರೂ ಹೊಣೆಗಾರರು ಎಂಬುದನ್ನು ನಿರೂಪಿಸು

ಪುವರಲ್ಲಿ ಈ ಕಿರುಕಾದಂಬರಿಯು ಸತ್ವ ಲೋಕಾತಿಕ್ರಾಂತವೂ, ಅಧ್ಯಾತ್ಮಿಕವೂ ಆಗುತ್ತದೆ." ತೇಜಸ್ವಿಯವರ ಆಲೋಚನೆ ಗೋಚರ ವಾಸ್ತವತೆಗೂ ಆಚೆ ಹರಿಯು ತ್ತಿರುವುದನ್ನೆ ಇದೂ ಸ್ಪಷ್ಟಪಡಿಸುತ್ತದೆ. ಆದರೆ ಕರ್ವಾಲೊ, ಚಿದಂಬರ ರಹಸ್ಯಗಳ ಕಲಾತ್ಮಕ ಸಿದ್ಧಿ ಇಲ್ಲಿ ಇಲ್ಲ.

೬

"ಯಮಳ ಪ್ರಶ್ನೆ, ಸ್ವರೂಪಗಳ ತಾತ್ತ್ವಿಕ ನಿಲುವು ಜೀವನವನ್ನು ಕುರಿತಂತೆ ನಿರ್ವೇದ ಪರದೃಷ್ಟಿಯನ್ನು ಬೆಳೆಸುವಂಥದಾಗಿದೆ" ಎಂದು ನಾಯಕರು ಅಭಿಪ್ರಾಯ ಪಟ್ಟರೂ, ಈ ನಿಲುವು ಒಂದು ಹಂತ ಮಾತ್ರ. ನಿಗೂಢ ಮನುಷ್ಯರು, ಕರ್ವಾಲೊ, ಚಿದಂಬರ ರಹಸ್ಯಗಳತ್ತ ಸಾಧ್ಯತೆಗಳ ಅನ್ವೇಷಣೆಯ ಹಂತಗಳು.

ಆ ನಿಟ್ಟಿನಲ್ಲಿನ ಇನ್ನೊಂದು ಬಗೆಯ ಪ್ರಯೋಗವನ್ನು 'ಅಬಚೂರಿನ ಪೋಸ್ಟಾಫೀಸು' ಸಂಕಲನದ ಕೆಲವು ಕಥೆಗಳಲ್ಲಿ ಕಾಣಬಹುದಾಗಿದೆ. 'ಹೊಸದಿಗಂತ ದೆಡೆಗೆ' ಎಂಬ ಮುನ್ನುಡಿಯಲ್ಲಿ 'ನವ್ಯ ಸಾಹಿತ್ಯದ ಈಚಿನ ಕವನಗಳು ಬಹುಪಾಲು ಧಾರ್ಮಿಕ ಅಥವಾ ರಿಲಿಜಿಯಸ್ ಆಗಿರುವುದೇ ಹೆಚ್ಚು. ಉದಾರ ಮತ್ತು ವಿಶಾಲ ಮನೋಭಾವವಿರುವ ಧರ್ಮಗಳಿಗೆ ಸಂಬಂಧಿಸಿದವರು ಧಾರ್ಮಿಕ ಕವಿಗಳೂ, ಶ್ರೇಷ್ಠ ಕವಿಗಳೂ ಆಗಬಹುದೇನೋ ! ಆದರೆ ಭಾರತದಲ್ಲಿ 'ರಿಲಿಜಿಯಸ್' ಆಗುವ ಕವಿ ಜನತಾ ದ್ರೋಹಿಯಶಾಗುತ್ತಾನೇಕೆಂದರೆ ಭಾರತದ ಬಹುಪಾಲು ಧರ್ಮಗಳೆಲ್ಲಾ ಮಾನವೀಯತೆಗೆ ವಿರೋಧಿಗಳಾಗಿವೆ" ಎನ್ನುತ್ತಾರೆ, ತೇಜಸ್ವಿ.

ವಾಸ್ತವವಾಗಿ ಮಾನವೀಯ ಗುಣವಿಲ್ಲದ ಧರ್ಮ ಧರ್ಮವೇ, ಅಲ್ಲ. ಧರ್ಮ ಗಳು ಹುಟ್ಟಿದ ಆಯಾ ಕಾಲದ ಹಿನ್ನಲೆಯಲ್ಲಿನ, ಅಂದಿನ ಸಮಕಾಲೀನ ಜೀವನ ದೃಷ್ಟಿಯೊಂದಿಗೆ ಅವುಗಳ ಮೌಲ್ಯವನ್ನು ಕಾಣಬೇಕಾಗುತ್ತದೆ. ಅನಂತರ ಅವುಗಳನ್ನು ವರ್ತಮಾನ ದೃಷ್ಟಿಯಲ್ಲಿ ವಿಮರ್ಶಿಸಬೇಕಾಗುತ್ತದೆ. ಇವೆರಡರ ಪರಿಧಿಯಾಚೆಯ ಅವುಗಳಲ್ಲಿರುವ ಸಾರ್ವಕಾಲಿಕ ದರ್ಶನ ಮೌಲ್ಯಗಳನ್ನು ಮಾತ್ರ ಸ್ವೀಕರಿಸಬೇಕಾಗು ತ್ತದೆ. ಆಗ ಯಾವುದೇ ಧರ್ಮ ಅಮಾನವೀಯವಾಗಲಾರದು. ಆಯಾ ಕಾಲದ ಮೌಲ್ಯವನ್ನೆ ಸಾರ್ವಕಾಲಿಕ ಎಂದು ಭ್ರಮಿಸಿದಾಗ ಎಲ್ಲ ದುರಂತಗಳಿಗೆ ನಾಂದಿ ಯಾಗುತ್ತದೆ. ಮತಧರ್ಮ ಸಂಬಂಧಿತ ಇಂದಿನ ಮೌಢ್ಯಗಳಿಗೆಲ್ಲ ಇದು ಕಾರಣ ವಾಗಿದೆ.

ಧರ್ಮ ಸಂಬಂಧ ತೇಜಸ್ವಿಯವರ ಚಿಂತನೆ, ನಿಲುವುಗಳು ಪ್ರಥಕ್ಕಾದುವಲ್ಲ. ಸಾಮಾಜಿಕ ಕಳಕಳಿಯಿಂದ ಬೇರ್ಪಟ್ಟುವಲ್ಲ. ಕೇವಲ ಸಾಮಾಜಿಕ ಮೇಲ್ಮೈ ಪದರ ಗಳನ್ನು ಬಿಡಿಸುವ ಕೃತಿಗಳು ಎಷ್ಟೇ ಕಲಾತ್ಮಕ ಎನಿಸಿದರೂ ಬದುಕಿನ ಸವಾಲುಗಳಿಗೆ

ಸಮಗ್ರ ದೃಷ್ಟಿಯ ಅರ್ಥ ನೀಡಲಾರವು. ಹಾಗೇ ಕೇವಲ ತಾತ್ತ್ವಿಕ ಸಿದ್ಧಾಂತಗಳೂ ಸಹ ಅವನತಿ, ಕುಬಿ ಮತ್ತು ಇಯಾಲ, ತುಕ್ಕೋಜಿಯಂತಹ ಕಥೆಗಳಲ್ಲಿ ವಾಸ್ತವಿಕತೆಯ ಸ್ತರದಲ್ಲಿ ಗೋಚರವಾಗುವ ಸಾಮಾಜಿಕ ಕಳಕಳಿ ಸರಳತೆಗೆ ತಿರುಗುತ್ತವೆ. ಇಲ್ಲಿಯ ಸರಳತೆಯಲ್ಲೂ ಸಾಂಕೇತಿಕ ಅರ್ಥ ಛಾಯೆಯ, ಅಥವಾ ಚಿಂತನೆಯ ಹೊಳಪು ಕಾಣಬರುತ್ತವೆ. ಈ ಸರಳತೆ ಮತ್ತು ಹಿಂದಿನ ಸಂಕೀರ್ಣತೆ ಎರಡು ತಂತ್ರ-ವಿಧಾನಗಳೂ ಸೇರಿದ ಸಂಯೋಜಿತ ರೂಪ. ನಿಗೂಢ ಮನುಷ್ಯರು, ಕರ್ವಾಲೊ, ಚಿದಂಬರ ರಹಸ್ಯಗಳಲ್ಲಿ ಸೃಜನಶೀಲ ಕಲಾತ್ಮಕತೆಯನ್ನು ಪಡೆಯುತ್ತದೆ. ಸಾಮಾಜಿಕಪ್ರಜ್ಞೆ-ತಾತ್ತ್ವಿಕ ನಿಲುವು ಸಾಮರಸ್ಯ ಹೊಂದಿ ಸಾಂಗತ್ಯಪೂರ್ಣ ಸಮಗ್ರ ಅಥವಾ ಸಂಯೋಜಿತ ರೂಪ ಪಡೆಯುತ್ತವೆ.

ಕರ್ವಾಲೊ ಮತ್ತು ಚಿದಂಬರ ರಹಸ್ಯಗಳಲ್ಲಿ ಮೇಲುನೋಟಕ್ಕೆ ಪತ್ತೇದಾರಿಯೆನ್ನಬಹುದಾದ ನಿರೂಪಣ ವಿಧಾನ ಮತ್ತು ಜೋಲಾ, ಸಿ.ಪಿ. ಸ್ನೋರ ಕಾದಂಬರಿಗಳಲ್ಲಿಯಂತೆ ವಸ್ತು ರಚನೆಯ ಲಯಬದ್ಧ ಬಂಧವನ್ನೂ ಕಾಣುತ್ತೇವೆ. ಆಶ್ವಾಸ-ಆಶ್ವಾಸಗಳ ಸಂಬಂಧ ಸರಪಳಿಯಂತೆಯೂ, ಕೆಲವೊಮ್ಮೆ, ಘಟನೆಯೊಂದರ ಸುತ್ತ ಚಕ್ರಾಕಾರದಂತೆ ಕೇಂದ್ರ ಘಟನೆಗೆ ವಿವಿಧ ವ್ಯಕ್ತಿತ್ವ, ಗುರಿ. ಉದ್ದೇಶಗಳುಳ್ಳ ಪಾತ್ರಗಳು ಸಂಬಂಧ ಪಡೆಯುತ್ತವೆ. ಇವಕ್ಕೆ ಪೋಷಕವಾಗಿ, ತೇಜಸ್ವಿಯವರ ಹಾಸ್ಯಪ್ರಜ್ಞೆ, ಘಟನೆಗಳನ್ನು, ಕ್ರಿಯೆ-ಪ್ರತಿಕ್ರಿಯೆಗಳನ್ನು, ಪಾತ್ರಗಳ ಸ್ವಭಾವ ವೈಚಿತ್ರ್ಯಗಳನ್ನು, ನಂಬಿಕೆ-ಅನಿಸಿಕೆಗಳನ್ನು ನಿರ್ಲಿಪ್ತವಾಗಿ ನಿರೂಪಿಸಲು ಸಾಧ್ಯವಾಗಿಸುತ್ತದೆ. ಸರಳವಾಗಿ ಓದಿಸಿಕೊಳ್ಳಲು ಇದೂ ಒಂದು ಕಾರಣ.

೨

'ನಿಗೂಢ ಮನುಷ್ಯರು' ಕೃತಿ ಬಗ್ಗೆ ಹೇಳುತ್ತಾ ನಾಯಕ್ ಅವರು ಉಗ್ರಗಿರಿ ಚಿರವಾಸ್ತವ: ಎನ್ನುತ್ತಾರೆ. ಮೋಡ, ಮಳೆ, ಗಾಳಿ, ಪ್ರವಾಹ, ಭೂಕಂಪ ಕಾದಂಬರಿಯನ್ನು ವ್ಯಾಪಿಸಿರುವ, ಆದರದೇ ಜಂಗಮ ಮುಖಗಳು ಎನ್ನುತ್ತಾರೆ. ವಾಸ್ತವವಾಗಿ ನಿಗೂಢವೇ ಇಲ್ಲಿಯ ಸ್ಥಾಯಿ. ಇಲ್ಲಿ ಎರಡು ಬಗೆಯ ನಿಗೂಢವನ್ನು ಕಾಣುತ್ತೇವೆ. ಒಂದು ನಿಸರ್ಗ, ಇನ್ನೊಂದು ಗೋಪಾಲಯ್ಯನ ವ್ಯಕ್ತಿತ್ವ. ನಿಗೂಢ ನಿಸರ್ಗದ ವ್ಯಕ್ತ ಕ್ರಿಯೆಗಳು ಮಾತ್ರ ನಮಗೆ ಮಳೆಗಾಳಿ ಭೂಕಂಪಗಳಾಗಿ ಗೋಚರವಾಗುತ್ತವೆ. ನಿಸರ್ಗವೂ ಗೋಪಾಲಯ್ಯನ ವ್ಯಕ್ತಿತ್ವದಂತೆ ವಿದಳನಗೊಳ್ಳುತ್ತದೆ. ಭೂಕಂಪದಿಂದ. ಭೂಕುಸಿತಗಳಿಂದ ನಿಸರ್ಗ ಪುನರ್‌ವ್ಯವಸ್ಥೆಗೊಳ್ಳುತ್ತದೆ. ಹಾಗೇ ಗೋಪಾಲಯ್ಯನ ಮನಸ್ಸಿನ ಒಳ ಕಂಪನವೂ ವಿದಳನದಿಂದ ಹೊಸರೂಪ-ವ್ಯಕ್ತಿತ್ವಕ್ಕೆ ಕಾರಣವಾಗುತ್ತದೆಯೇ ಎಂಬುದು ಕೊನೆಯಲ್ಲಿ ಸ್ಪಷ್ಟವಾಗುವುದಿಲ್ಲ. ಸ್ವರೂಪವಲ್ಲಿ

ಮಾತುಗಳಿಂದ ವ್ಯಕ್ತಿತ್ವ ಬಿಚ್ಚುತ್ತಾ, ತನ್ನನ್ನೆ ರೂಪಿಸಿಕೊಂಡು ಶ್ರೀನಿವಾಸ ಹೊಸ ವ್ಯಕ್ತಿಯಾಗುವಂತೆ ಇಲ್ಲೂ ಸಹ ಎಂದು ಊಹಿಸಬಹುದೇನೋ.

ಗೋಪಾಲಯ್ಯ ಹೇಳುವ—"ಜಗನ್ನಾಥ 'ಏಳಿ! ಗಿರಿ ಎಚ್ಚತ್ತಿದೆ, ಕೇಳಿ! ಅದು ಉಸುರುವ ಪಿಸುಮಾತನ್ನು...ಇದು ಜಗತ್ತಿನ ಕೊನೆ! ! ....ಎಲ್ಲ ಅನುಭವಗಳ ಶಿಖರ!! ಇದು ಸಾವು ಹೌದು. ಇನ್ನು ಬೆಳಗಾಗುವುದೆ ಇಲ್ಲ,' ಏಳಿ, ಎಚ್ಚರಾಗಿರಿ" ಎಂಬ. ಕತ್ತಲೆಯಲ್ಲಿ ಕೇಳಿಸುವ 'ಅಶರೀರವಾಣಿ'ಯಿಂದ ನಿಸರ್ಗಪ್ರಜ್ಞೆ ಅಥವಾ ವಿಶ್ವ ಪ್ರಜ್ಞೆಗೂ ವ್ಯಕ್ತಿಪ್ರಜ್ಞೆಗೂ ಇಲ್ಲಿ ಸಂಬಂಧ ಸೂಚಿತವಾಗುತ್ತದೆಂಬೀ ? ಸಾವು, ಜಗತ್ತಿನ ಕೊನೆ ಎಂದೆಲ್ಲ ಹೇಳಿದರೂ ನಿಸರ್ಗದಲ್ಲಿ ಇಂತಹ ಆವರ್ತನಗಳು ಆಗುತ್ತಿರುತ್ತವೆ. ಅದು ಚಿರವಾಸ್ತವ-ನಿಗೂಢ, ಆವರ್ತನದಲ್ಲಿ ಏರಿ ಇಳಿಯುವವರು, ಮುಳುಗಿ ಏಳುವವರು ಜೀವರಾಶಿ ಮಾತ್ರ. ಗೋಪಾಲಯ್ಯನ ಮಾತುಗಳಲ್ಲಿ ಕಾರ್ಲ್‌ಯುಂಗನ್ ಕಲೆಕ್ಟಿವ್ ಕಾನ್ಷಿಯಸ್‌ನೆಸ್‌ಗೆ ಹೋಲುವ ಅರ್ಥಛಾಯೆ ಇದೆ : "ಅಸಂಖ್ಯಾತ ಅನುಭವಗಳು ಎದ್ದೆದ್ದು ಮುಳುಗುವ ಕಡಲು ಈ ಪ್ರಜ್ಞೆ. ನಾನೆಂದರೆ ಇದನ್ನೆಲ್ಲ ಸೇರಿಸಿದ ಜ್ಞಾಪಕ"-ಎನ್ನುತ್ತಾನೆ. ಇದರಿಂದ ತೇಜಸ್ವಿಯವರ ನಿಲುವಿನಲ್ಲಿ ಹಾಗೂ ಕೃತಿಗಳ ಅಭಿವ್ಯಕ್ತಿ ವಿಧಾನದಲ್ಲಿ ಕಾಣಬರುವ ನಿಸರ್ಗ ಹಾಗೂ ನಿಸರ್ಗದ ಪ್ರಾಡೆಕ್ಟ್ ಅಥವಾ ಭಾಗವಾದ ಮನುಷ್ಯಪ್ರಜ್ಞೆ ಎಲ್ಲೋ ಆಳ ಸ್ತರದಲ್ಲಿ ಹೆಣೆದು ಕೊಂಡಿರುವ ಸೂಚನೆ ಈ ಕೃತಿಯಿಂದಲೇ ಪ್ರಾರಂಭವಾಗುತ್ತದೆ. ಈ ಕೃತಿಯಲ್ಲಿ ಬರುವ ಇತರ ಪಾತ್ರಗಳೂ, ರಂಗಪ್ಪ, ಜಗನ್ನಾಥ, ಮೂಕಿಯಾದ ಶಾರಿ, ಮಾಂಸ ಕ್ಕಾಗಿ ಮಗನ ಶವದಲ್ಲಿ ಮದ್ದಡಗಿಸಿ ಪ್ರಾಣಿಯನ್ನು ಕೊಲ್ಲುವ ಆಳೂ ಸಹ ಚಿರ ವಾಸ್ತವ-ನಿಗೂಢರೇ ಆಗುತ್ತಾರೆ. ಇಲ್ಲಿ ಘಟನೆಗಳು, ವಿವರಗಳು ಒಂದು ಕಟ್ಟಣೆಯ ಅನುಭವ ಕೊಡುತ್ತಾ, ಒಟ್ಟು ವಾಸ್ತುವಿನಿಂದ ಧ್ವನಿಯಿಸುವ ಅರ್ಥ. ಆಗುವ ಅನುಭವವೇ ಬೇರೆಯಾಗುತ್ತದೆ. ನಿಗೂಢದ ವಿಶ್ಲೇಷಣೆಗೆ ತೊಡಗಿದರೂ, ಕೊನೆಗೆ ಅದು ನಿಗೂಢವಾಗೇ ಉಳಿಯುತ್ತದೆ ಎಂಬುದನ್ನು ಕಥನತಂತ್ರ ತನ್ನ ಸಮಗ್ರ ರೂಪ ದಲ್ಲಿ ಉಂಟುಮಾಡುತ್ತದೆ. ಇದು ನವ್ಯತಂತ್ರಕ್ಕಿಂತ ಭಿನ್ನವಾದದ್ದು.

೩

'ನಿಗೂಢ ಮನುಷ್ಯರು' ಕಾದಂಬರಿಯ ಅನ್ವೇಷಕನ ನಿಲುವೇ 'ಕರ್ವಾಲೊ' ಕಾದಂಬರಿಯಲ್ಲಿ ಹೆಚ್ಚು ವ್ಯಾಪಕವಾಗಿ, ಬದುಕಿನ ಸಹಜ ಲಯಗತಿಯನ್ನು ಅನುಸರಿಸಿದ ನಿರೂಪಣೆಯ ಸಹಜ ಲಯಗತಿಯಿಂದ ಕಲಾತ್ಮಕವಾಗುತ್ತದೆ. ಇದು ಸಂಕೇತ, ಇದು ಪ್ರತಿಮ ಎಂದು ಪ್ರತ್ಯೇಕವಾಗಿ ಗುರುತಿಸಬೇಕಾದ ಅಗತ್ಯ ಬರುವುದಿಲ್ಲ. ಏಕೆಂದರೆ ನಾಯಕ ಅವರು ಸೂಚಿಸಿರುವಂತೆ "ವ್ಯಕ್ತಿ ಮತ್ತು ಸಂಗತಿಗಳು ಬದುಕಿನ

ಸಹಜ ಲಯದಲ್ಲಿ ಆದರೆ ವಾಸ್ತವಿಕತೆಯ ಸ್ತರದಲ್ಲಿ ಸಾಂಕೇತಿಕ ಅರ್ಥ ಛಾಯೆಗಳ ಅನುರಣನಗಳನ್ನು ಮೆಲು ದನಿಯಲ್ಲಿ ನುಡಿಸುವಂತಿವೆ."

ಮಿಲಿಯಾಂತರ ವರ್ಷಗಳ ಹಿಂದಿನ ವಿಕಾಸ ಪಥದ 'ಹಾರುವ ಓತಿ' ಇಲ್ಲಿ ಚಿರ ವಾಸ್ತವ. ಆ ಪ್ರಾಣಿಯ ಅರಿವಿನಿಂದ ಸೃಷ್ಟಿ ರಹಸ್ಯಭೇದ ಸಾಧ್ಯ ಎಂಬಂತೆ ಕಥಾ ಸರಣಿ ಸಾಗುತ್ತದೆ, ಪಾತ್ರಗಳು ಕಾಣಿಸಿಕೊಳ್ಳುತ್ತವೆ, ಪರಸ್ಪರ ಸಂಬಂಧ ಪಡೆಯು ತ್ತವೆ. ಮನುಷ್ಯನ ಎಲ್ಲ ಅನ್ವೇಷಣೆಗಳು ಒಂದಲ್ಲ ಒಂದು ಕಡೆ ನಿಲುಗಡೆ ತಲುಪು ತ್ತವೆ. ಮೀರಿ ಸಾಗಲು ಸಾಧ್ಯವಿಲ್ಲ, ರಹಸ್ಯವನ್ನು ಭೇದಿಸಲು ಸಾಧ್ಯವಿಲ್ಲ ಎಂಬುದು ಇಲ್ಲಿ ಸೊಗಸಾಗಿ ಬಂದಿದೆ. ಕರ್ವಾಲೊ ಹಾಗೂ ಚಿದಂಬರ ರಹಸ್ಯ ಕಾದಂಬರಿಗಳ ಕೊನೆಯ ದೃಶ್ಯಗಳು ಅತ್ಯಂತ ಪರಿಣಾಮಕಾರಿಯೂ ಕಲಾತ್ಮಕವಾಗಿಯೂ ಚಿತ್ರಿತ ವಾಗಿವೆ. ಕರ್ವಾಲೊದಲ್ಲಿ ಅನ್ವೇಷಣೆಯ ಅಂತಿಮ ಘಟ್ಟದಲ್ಲಿ ಕಾಣಬರುವ ಹಾರುವ ಓತಿಯನ್ನು ಹಿಡಿಯಲಾಗದೆ, ಬೆಟ್ಟದ ನೆತ್ತಿಯ ಕೋಡುಗಲ್ಲಿನಾಚೆಗೆ, ಪ್ರಪಾತದ ಕಡೆಗೆ ಚಿಮ್ಮಿ, ಪಕ್ಕಗಳೇ ರೆಕ್ಕೆಯಾಗಿ ತೇಲಿ ತೇಲಿ ನೀಲಿಯ ಅಸ್ಪಷ್ಟ ಶೂನ್ಯದತ್ತ ಯಾನ ಮಾಡುವುದನ್ನು ನೋಡಿ "ಹೋಗಲಿ ಬಿಡಿ, ಬ್ಯಾಡ್‌ಲಕ್ ; ಆದರೆ ಏನೂ ಬೇಸರವಿಲ್ಲ" ಎನ್ನುತ್ತಾರೆ ಕರ್ವಾಲೊ. ಆದ್ದರಿಂದ ವೈಫಲ್ಯ ನಿರಾಶೆಯನ್ನು ಕವಿಸು ವುದಿಲ್ಲ. ಈ ಅನ್ವೇಷಣೆಯಿಂದ ಬರಬಹುದಾದ ತಿಳಿವಳಿಕೆ ನಷ್ಟವಾದರೂ ಪ್ರಪಂಚ ಮುಳುಗಿಹೋಗುವುದಿಲ್ಲ. ಬದುಕು ಸಾಗಿಯೇ ಸಾಗುತ್ತದೆ. ಬದುಕು ಬದುಕದೇ ತಿರುವುದಿಲ್ಲ. ಅರಿವು ಬರಲಿ ಬಿಡಲಿ ತಿಳಿದಷ್ಟೇ ಸಾರ್ಥಕ ಎಂಬ ನಿಲುವು ಇದೆ.

ಇಲ್ಲಿ ಬರುವ ಪಾತ್ರಗಳು ಸಾಮಾನ್ಯವಾದವೂ ವಿಶಿಷ್ಟವಾದವೂ ವೈದೃಶ್ಯ ವನ್ನುಂಟು ಮಾಡುತ್ತವೆ. ಮಂದಣ್ಣ ಅರಿವಿಲ್ಲದಿದ್ದರೂ ಅದ್ಭುತ ಪ್ರಕೃತಿ ಶಾಸ್ತ್ರಜ್ಞ : ಕರ್ವಾಲೊ ವಿಜ್ಞಾನಿ, ಅಕಾಡೆಮಿಕ್ ಚೌಕಟ್ಟು ಉಳ್ಳವರು. ಹಾವಿನ ಅದ್ಭುತ ಜ್ಞಾನವುಳ್ಳ ಎಂಗ್ಟ, ಬಿರ್ಯಾನಿ ಕರಿಯಪ್ಪ—ಇವರೆಲ್ಲ intuitive ಆದ ಸಹಜ ಪ್ರತಿಭೆ ಉಳ್ಳವರು. ಜೀವಿಯ ವಿಕಾಸ ಪಥದಲ್ಲಿ ಕ್ಷುಲ್ಲಕ, ಸಾಮಾನ್ಯ ವ್ಯಕ್ತಿಗಳೂ ಗಮನಾರ್ಹ ಪಾತ್ರವಾಗುತ್ತಾರೆ, ನಿರರ್ಥಕರಾಗುವುದಿಲ್ಲ.

ತೇಜಸ್ವಿಯವರು ಪತ್ತೇದಾರಿಯ ವಿಧಾನ ಬಳಸಿಕೊಂಡಿರುವುದೆ ಮೂಲದ ಅನ್ವೇಷಕ ದೃಷ್ಟಿಯನ್ನು ಬಿಂಬಿಸುತ್ತದೆ. ವಿಜ್ಞಾನಿಯಾಗಲಿ, ತತ್ತ್ವಜ್ಞಾನಿಯಾಗಲಿ ಎಲ್ಲರೂ ಅನ್ವೇಷಕರೆ, ಪತ್ತೇದಾರರೆ ಆದ್ದರಿಂದ ವಸ್ತುವಿನ ಅನ್ವೇಷಣೆಯೇ ಇಲ್ಲಿ ಅಭಿವ್ಯಕ್ತಿ ವಿಧಾನವೂ ಆಗಿ ರಚನೆ ಕಲೆಯಾಗುತ್ತದೆ.

"ಒಬ್ಬ ಬರಹಗಾರನಿಗೆ ಕೆಲವು ವಾಸ್ತವ ಸಂಗತಿಗಳನ್ನು ತಿಳಿಸಿದರೆ ಅವನು ಸತ್ಯಕ್ಕೆ ತೀರಾ ಹತ್ತಿರವಾದ ಕಲಾಕೃತಿ ರಚಿಸುತ್ತಾನೆ, ಅಂಗಾಡಿ"—ಎನ್ನುತ್ತಾನೆ ಜಯರಾಂ, ಚಿದಂಬರ ರಹಸ್ಯ ಕಾದಂಬರಿಯಲ್ಲಿ. ವಾಸ್ತವ ಸಂಗತಿಗಳನ್ನೆ ನಿರೂಪಿಸುತ್ತಾ ತೇಜಸ್ವಿ ಸತ್ಯಕ್ಕೆ-ಅದು ನಮ್ಮಲ್ಲಿ ಬಹುಸಂಖ್ಯೆಗೆ ಹಿಡಿಸದಿದ್ದರೂ-ತೀರಾ ಹತ್ತಿರ ಸಾಗುತ್ತಾರೆ.

ಕರ್ವಾಲೊ ಒಬ್ಬ ವಿಜ್ಞಾನಿಯ ಹೆಸರು. ಚಿದಂಬರ ರಹಸ್ಯ ಅದಕ್ಕಿಂತ ಭಿನ್ನವಾದ ಶೀರ್ಷಿಕೆ. ಚಿದಂಬರ ರಹಸ್ಯ ಎಂದರೆ **'ಚಿತ್ ಎಂಬ ಆಕಾಶ'** ಎಂದೂ **ಆಗಬಹುದು** ಅಥವಾ **ಚಿತ್ತು ಮತ್ತು ಆಕಾಶ** ಎಂದೂ ಆಗಬಹುದು. ಸಾಮಾನ್ಯ ಬಳಕೆಯ ಬಿಡಿಸಲಾಗದ, ತಿಳಿಯಲಾಗದ ರಹಸ್ಯವೂ ಆಗಬಹುದು. ಒಳ ಮತ್ತು ಹೊರ ವಿಶ್ವಗಳ ಸಮಗ್ರ ದೃಷ್ಟಿಯ ಅನ್ವೇಷಣೆಯೂ ಆಗಬಹುದು.

ಹಾಗೇ ಕೆಸರೂರು ಪ್ರಸ್ತುತ ಭಾರತವಾಗಬಹುದು, ವಿಶ್ವದ ಪ್ರಾತಿನಿಧಿಕ ಕೇಂದ್ರವಾಗಬಹುದು.

ವಿಜ್ಞಾನ, ತತ್ತ್ವಜ್ಞಾನ, ಸಮಾಜದ ಮೂಢನಂಬಿಕೆಗಳು ತಮ್ಮದೇ ಹಾದಿಯಲ್ಲಿ ಸತ್ಯದ ಅನ್ವೇಷಣೆಗೆ ತೊಡಗುತ್ತವೆ. ಅವುಗಳ ವಲಯಗಳಲ್ಲಿ ತಮ್ಮದೇ ನಿಯಮ ಸೂತ್ರಗಳಿಗೆ, ಪ್ರೇರಣೆ ಚಾಲನೆ ಗತಿಗಳಿಗೆ ತಕ್ಕಂತೆ ಸಾಗುತ್ತ ಅಂತಿಮವಾಗಿ ನಿಗೂಢವನ್ನೆ ಎದುರಿಸುತ್ತವೆ.

ಮಹಾಸ್ಫೋಟದಿಂದ ಸೃಷ್ಟಿಚಾಲನೆಯಾಗಿ 1500 ಕೋಟಿ ವರ್ಷಗಳಾಗಿವೆ ಎಂದು ವಿಜ್ಞಾನಿಗಳು ಹೇಳುತ್ತಾರೆ. ಹಾಗೇ ಪರಮಾಣು ವಿಭಜಿಸಿ, ಕೇಂದ್ರ ಕೋಶದ ಪ್ರೊಟಾನುಗಳ ಕಣಗಳನ್ನು ಬೇರ್ಪಡಿಸಿದರೆ ಸಿಗುವ ಕ್ವಾರ್ಕ್‌ಗಳಿಗಿಂತಲೂ ಸೂಕ್ಷ್ಮಕ್ಕೆ ಇಣುಕಲು ಸಾಧ್ಯವಾಗದೆ, ಬಾಹ್ಯ ಮತ್ತು ಸೂಕ್ಷ್ಮಲೋಕಗಳಲ್ಲಿ ವಿಜ್ಞಾನಿಯೂ ವಿಶ್ವದ ನಿಗೂಢತೆಯನ್ನು ಭೇದಿಸಲಾರದಾಗಿದ್ದಾನೆ. ಅವನಿಗೆ 'ಜೀವ' ಕಗ್ಗಂಟಾಗಿದೆ. ತತ್ತ್ವಜ್ಞಾನಿಯೂ ತನ್ನಲ್ಲಿ ಧ್ಯಾನ–ಚಿಂತನೆಗಳಿಂದ ಕೊನೆಗೂ ಮೂಕವಾಗುತ್ತಾನೆ. ಮೂಢನಂಬಿಕೆಗಳೂ ಬೆರಗಿನಲ್ಲಿ ಮುಕ್ತಾಯಗೊಳ್ಳುತ್ತವೆ. ಈ ಎಲ್ಲವೂ ವಿವಿಕ್ತವಾದುದಲ್ಲ, ಪರಸ್ಪರ ಹೆಣೆದುಕೊಂಡಿರುವುವು ಎಂಬ ಸಮಗ್ರ ದೃಷ್ಟಿ ದೊರೆತಾಗ ಇಂದಿನ ದುರಂತ ಸ್ಥಿತಿಗೆ ನಿಲುಗಡೆಯಾಗಬಹುದೇನೊ. ಇದರ ಅನ್ವೇಷಣೆಯೇ ಈ ಕಾದಂಬರಿಯಲ್ಲಿ ಪ್ರಧಾನವಾಗಿದೆ.

ಪ್ರಜ್ಞೆ ವಿಧಿನಿಯಮಗಳ ಅಧೀನವೊ ಸ್ವತಂತ್ರವೊ ಎಂಬ ಪ್ರಶ್ನೆಗೆ ಉತ್ತರದ ಅನ್ವೇಷಣೆಯಾಗಬೇಕಿದೆ. ಡಾ॥ ಪಾಟೀಲರು "........ಇದು ಈ ವಿಶ್ವದ ಚಿದಂಬರ ರಹಸ್ಯ. ಯಾವನು ಹೇಗೆ ನಂಬ್ತಾನೊ ಹಾಗೆ ಕಾಣ್ತಾ ಹೋಗುತ್ತೆ" ಎನ್ನುತ್ತಾರೆ.

ಡಾ॥ ಜೋಗಿಹಾಳರ ಮರಣ, ಕೊಲೆ ಎಂದಾಗಿ, ಕೊನೆಗೆ ಅವರು ಸತ್ತಿದ್ದಾರೆಯೆ ? ಎಂಬ ಪ್ರಶ್ನೆಯಾಗಿ ಉಳಿಯುತ್ತದೆ. "ಪ್ರಜ್ಞೆಯನ್ನು ತಿಳಿಯೋದಿಕ್ಕೆ ಈ ವಿಶ್ಲೇಷಣೆ ವಿಧಾನ ಅನುಸರಿಸೋದೆ ತಪ್ಪು. ಮನಸ್ಸಿಗೆ ಮನಸ್ಸು, ಪ್ರಜ್ಞೆಗೆ ಪ್ರಜ್ಞೆ ಯಾವತ್ತೂ ವಿಶ್ಲೇಷಣೆಯ ವಸ್ತು ಆಗೋದೇ ಇಲ್ಲ ಕಣೊ" ಎಂಬುದು ಜಯರಾಂ ಮಾತು. ಬಹುಶಃ ನಮ್ಮರ ಕಥಾ ನಾಯಕನ ಕೇಂದ್ರ ಪ್ರಜ್ಞೆ ವಿಧಾನಕ್ಕೆ ಪ್ರತಿಕ್ರಿಯೆ ಎಂಬಂತೆ ಈ ಮಾತುಗಳು ತೋರುತ್ತವೆ.

ಹೀಗೆ ಮನುಷ್ಯ ಪ್ರಜ್ಞೆಯನ್ನು ಪರಿಸರದ ವಲಯದಲ್ಲಿ juxtapose ಮಾಡಿನೋಡಿದಾಗ ಗೋಚರವಾಗುವ ಸತ್ಯವೇ ಬೇರೆಯಾಗುತ್ತದೆ. ಕೆಸರೂರಿನ ಏಲಕ್ಕಿಗೆ ಸಂಸ್ಕೃತಿಗೆ ಒಟ್ಟಿಗೇ ರೋಗ ತಗುಲಿಕೊಂಡಿದೆ ಎಂಬ ಪಾಟೀಲರ ಮಾತು ಕಾದಂಬರಿಯ ಉದ್ದೇಶವನ್ನು ತಿಳಿಸುತ್ತವೆ. ವೈರಸ್ ಕಾಗದ, ಹೆಚ್ಚು ಫಲಸಂಪತ್ತಿನ ಏಲಕ್ಕಿಯಕಾಯಿ ಗಿಡವನ್ನು ಅನ್ವೇಷಿಸಿದ ಡಾ॥ ಜೋಗಿಹಾಳರ ಮರಣ, ಅದು ಕೊಲೆಯೇ ಎಂಬುದನ್ನು ಪತ್ತೆ ಮಾಡುವುದು, ಟಿಪ್ಪಣಿಯಲ್ಲಿ ಬರೆದಿದ್ದ ಗಿಡಕ್ಕಾಗಿ ಹುಡುಕಾಟ—ಇವು ಪಾತ್ರಗಳ ನಂಬಿಕೆ, ಭ್ರಮೆಗಳಿಗೆ ತಕ್ಕಂತೆ ಪ್ರತಿಕ್ರಿಯೆಯನ್ನೆಬ್ಬಿಸಿ ಕಥೆ ಬೆಳೆಯುತ್ತದೆ. ಮನುಷ್ಯನ ವರ್ತನೆ ನಿಸರ್ಗನಾಶಕ್ಕೆ ಪರಿಸರದ ಸಮತೋಲ ನಾಶಕ್ಕೆ ಹಲವಾರು ಬಗೆಯಿಂದ ಕಾರಣವಾಗುತ್ತಿರುವ ಚಿತ್ರ ಬಿಡಿಸಿಕೊಳ್ಳುತ್ತದೆ.

ತೇಜಸ್ವಿಯವರು ವಾಸ್ತವ ಚಿತ್ರಗಳನ್ನು ನೀಡುತ್ತಲೇ ಅವುಗಳಿಗೆ ಧ್ವನಿಶಕ್ತಿಯನ್ನು ತುಂಬಿಕೊಡುತ್ತಾರೆ. ವೈಜ್ಞಾನಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಅಂಶಗಳೆಲ್ಲ ಬೇರುಗಳಂತೆ ತಲದಲ್ಲೆಲ್ಲೊ ಹೆಣೆದುಕೊಂಡಿರುವ ಸಮಗ್ರ ಅನುಭವ ಈ ಕಾದಂಬರಿಯಿಂದಾಗುತ್ತದೆ. ದುರಂತ, ವಿನಾಶದ ಛಾಯೆ ಕವಿದಿದ್ದರೂ ತೇಜಸ್ವಿ ನಿಸರ್ಗದ ಇನ್ನೊಂದು ಮಹತ್ವದ ಅಂಶದ ಕಡೆ ಗಮನ ಸೆಳೆಯುತ್ತಾರೆ. ಸುಟ್ಟು ನಾಶವಾಗುವ ಕಾಡು ಮತ್ತೆ ಚಿಗುರುವ ಶಕ್ತಿ, ಬೂದಿಯಿಂದಲೇ ಚೈತನ್ಯ ಚಿಮ್ಮುವ ಶಕ್ತಿ ಹೊಂದಿದೆ ಎನ್ನುವಲ್ಲಿ ನಿಸರ್ಗದ ಚಿರಂತನ ಆವರ್ತನ ಕ್ರಿಯೆಯೂ, ಅದರಲ್ಲಿ ಅಡಗಿರುವ auto-generation ಎನ್ನಬಹುದಾದ in-built mechanism ಶಕ್ತಿಯೂ ಡಾ॥ ಪಾಟೀಲರ ಮಾತುಗಳಿಂದ ಸೂಚಿತವಾಗುತ್ತದೆ. ಹಾಗೆ ಸಂಸ್ಕೃತಿ-ನಾಗರಿಕತೆಗಳು ಸಹ. ಜಾತಿ-ಕೋಮು ದೊಂಬಿಯಿಂದ ಕೆಸರೂರು ಮತ್ತು ಲಾಂಟಾನಾ ಕಾಡು ಸುಟ್ಟು ಬೂದಿಯಾಗುವ ಅಂತಿಮ ದೃಶ್ಯಗಳಲ್ಲಿ ರಫಿ—ಜಯಂತಿ ಬೆಟ್ಟದ ತುದಿ ತಲುಪಿ, ಉಡುಪೆಲ್ಲ ಹರಿದುಬಿದ್ದ ಸ್ಥಿತಿಯಲ್ಲಿ, ಹೊಗೆ ಆವರಿಸಿದ್ದ ಕೆಸರೂರನ್ನು ನೋಡುತ್ತಾರೆ. ಬೆಟ್ಟದ ನೆತ್ತಿಯೇರುವ ಮುನ್ನ ಕೆಸರೂರು ಹೈಬ್ರಿಡ್ ಅನ್ನು ಅವರು ಮಾತ್ರವೇ ಕಾಣುವುದು. ನಿಸರ್ಗಕ್ಕೆ ಏಲಕ್ಕಿ ಹೈಬ್ರಿಡ್ ಕಾಯಿ

ಗಿಡವಾದರೆ, ರಫಿ-ಜಯಂತಿ ನವಸಮಾಜದ ಹೈಬ್ರಿಡ್‌ನ ಮೂಲವಾಗುವ ಸೂಚ ನೀಡುತ್ತಾರೆ.

ಈ ಅಂತಿಮ ದೃಶ್ಯ ಕುವೆಂಪು ಅವರ ಸ್ಮಶಾನ 'ಕುರುಕ್ಷೇತ್ರ'ದಲ್ಲಿ ಕೃಷ್ಣ ಕಲಿಯುಗದ 'ಬಡಕುಟುಂಬ'ದ ದರ್ಶನ ಮಾಡಿಸುವ ದೃಶ್ಯವನ್ನು ನೆನಪಿಗೆ ತರುತ್ತದೆ. ರಫಿ—ಜಯಂತಿಯರ ಪ್ರೇಮ ಒಂದು ಯುಗಾಂತ-ಇನ್ನೊಂದು ಯುಗದ ಆದಿಯ ಸಂಭಾವ್ಯತೆಯ ದರ್ಶನವನ್ನು ಮಾಡಿಸುತ್ತದೆ.

ದಟ್ಟವಾದ ವಾಸ್ತವಿಕ, ಮೂರ್ತ: ಗ್ರಾಹ್ಯ ವಿವರಗಳ ಕಟ್ಟಣೆಯಿಂದಲೆ ವಾಸ್ತು ನಿರ್ಮಾಣವಾಗುತ್ತದೆ. ಮೊಸಾಯಿಕ್ ಚಿತ್ರ ಮೂಡುತ್ತದೆ. ಸಂಕೇತಗಳ ಅಗತ್ಯವೇ ಬರುವುದಿಲ್ಲ. ಸಂಯೋಜನೆಯಲ್ಲಿ ವಿಜ್ಞಾನ ತತ್ತ್ವಜ್ಞಾನಗಳ ಸಮಗ್ರ ದೃಷ್ಟಿ ರೂಪ ತಳೆಯುತ್ತದೆ. ವಿವರಗಳು ತಮ್ಮ ಅಂತರಿಕವಾದ ಸ್ವಯಂ ಮೌಲ್ಯ ಗಳನ್ನು ಉಳಿಸಿಕೊಂಡೂ ಮಾನವೀಯವಾದ ಜೀವನ ಮೌಲ್ಯವನ್ನು ನೀಡುತ್ತವೆ. ಇದು ತೇಜಸ್ವಿಯವರ ಸಾಹಿತ್ಯ-ಕಲೆಯ ಅಪೂರ್ವ ಸಾಧನೆ.

---

# ಅವರು

---

ಅವರು ಸತ್ತರೂ ಬದುಕುವರು
ಹುಟ್ಟುತ್ತಿದ್ದಾರವರು ಬೆಳೆಯುತ್ತಿದ್ದಾರೆವರು
ನನ್ನ ಪ್ರಿಯ ಕಾಮ್ರೇಡರು
ಸಾಯುತ್ತಿರುವಾಗಲೇ ಬದುಕಲಾರಂಭಿಸುವರು ನಮ್ಮೊಳಗೆ
ಮಣ್ಣಿನ ಮನೆಗಳಲ್ಲಿ ವರ್ಕ್‌ಶಾಪ್‌ಗಳಲ್ಲಿ ಎಲ್ಲೆಲ್ಲೋ
ಆತಂಕದ ಆ ದಿನಗಳಿಂದ ಆತಂಕದ ಈ ದಿನಗಳಲ್ಲಿ
ಒಬ್ಬೊಬ್ಬರು ಬಯಲಿಗೆ ಬಂದು ಮುಂದೆ ಮುಂದೆ ನಡೆಯುವರು
ಮಾತಾಡದೆ ಮೇಲೆ ಬೀಳದೆ ಬದುಕಿನೊಳಗೆ ಮುಳುಗುವರು
ಒಬ್ಬರ ಹಿಂದೆ ಮತ್ತೊಬ್ಬರು ನಡೆಯುತ್ತಲೇ ಇರುವರು
ವೇಗದಿಂದ ನಡೆಯುತ್ತ ಪ್ರಾಣವನ್ನು ಚೆಲ್ಲುವರು
ಹಿಂದೆ ನನ್ನ ಕಾಮೇಡರು
ಸರತಿಯಂತೆ
ಆಗಮಿಸುತ್ತಲೇ ಇರುವರು ಹೋರಾಟದ ರಂಗಕ್ಕೆ.

ಯುಗೋಸ್ಲಾವ್ ಮೂಲ : **ಜೂರೇಕಾಸ್ತೆಲಾವ್**
ಅನುವಾದ : **ಕುಂ. ವೀರಭದ್ರಪ್ಪ**

# ಕೆ.ಕೆ. ಹೆಬ್ಬಾರರ ಕಲೆ

—ಎಸ್. ವೆಂಕಟವಿಶ್ವನಾಥ
(ಹರಿಹರಪ್ರಿಯ)

ಬದುಕಿನ ಸರ್ವಾಂಗೀಣ ಬೆಳವಣಿಗೆಯಲ್ಲಿ ಆಸಕ್ತಿ ಇರುವ ವ್ಯಕ್ತಿಗಳು ; ಕಲೆ ಮತ್ತು ಸಮಾಜದ ನಡುವಿನ ಸಂಬಂಧ ಕುರಿತು ತೀವ್ರವಾಗಿ ಆಲೋಚಿಸುವ ಸ್ಥಿತಿ ಎದುರಾಗಿದೆ. ಏಕೆಂದರೆ, ಕಲೆಯ ವ್ಯಾಕರಣ ಕುರಿತ ವ್ಯಾಖ್ಯಾನಗಳು, ಸಮಾಜ ಕುರಿತ ಆಖ್ಯಾನಗಳು-ಸಹೃದಯನ ಮೇಲೆ ಗೊಂದಲ ಉಂಟು ಮಾಡುತ್ತಿವೆ.

ದೃಶ್ಯ ಮಾಧ್ಯಮ ವ್ಯಾಖ್ಯಾನಕಾರರು, ಅದರಲ್ಲಿಯೂ ಚಿತ್ರಕಲೆಯವರು, ತಲುಪಿರುವ ನಿರ್ಣಯ ಅಥವಾ ತಳೆದ ಅಗ್ರಹಗಳು ಇಂತಿವೆ. (ನೇರವಾಗಿ, ನಿಮಗೆ ಚಿತ್ರಕಲೆ ನೋಡುವ ಹಕ್ಕಿಲ್ಲ ಎನ್ನುವ ಬದಲಿಗೆ ಹೊರಟ ಆಪಾದನೆಗಳೋ ಇವು ಅನ್ನಿಸುತ್ತಿವೆ) :

1) ಸಾಹಿತ್ಯವನ್ನು ಓದುವ ವ್ಯಕ್ತಿಗೆ ತಾನು ವ್ಯಾವಹಾರಿಕವಾಗಿ ಬಳಸುವ ಭಾಷೆಯೇ ಅಲ್ಲಿರುವುದರಿಂದ, ಪ್ರಾಥಮಿಕವಾಗಿ, ಸಂವಹನದ ಸಮಸ್ಯೆ ಎದುರಾಗುವುದಿಲ್ಲ. ಚಿತ್ರಕಲೆ ನೋಡುವಲ್ಲಿ ಮಾತ್ರ ಈ ಸಮಸ್ಯೆಯೇ ಮುಖ್ಯವಾದ್ದು.
2) ಸಾಹಿತ್ಯದ ಪ್ರಭಾವವೋ ಅಥವಾ ವ್ಯಕ್ತಿಯಲ್ಲಿಯೇ ಮೂಡಿ ಬಂದಿರುವ ಸ್ಥಿತಿಯೋ-ಚಿತ್ರಕಲೆ ನೋಡುವಾಗಲು ಅರ್ಥವನ್ನು, ವಸ್ತುಸ್ಥಿತಿಯನ್ನು ಕಾಣಬಯಸುತ್ತಾನೆ.
3) ಚಿತ್ರಕಲೆಯನ್ನು ನೋಡುವ ಕಣ್ಣು, ಮನಸ್ಸು, ತಕ್ಕ ಶಿಕ್ಷಣ—ವ್ಯಕ್ತಿಗಳಲ್ಲಿ ಇಲ್ಲವಾಗಿವೆ.

ಬಹುಶಃ ಈ ಧೋರಣೆಗಳು ಈವರೆಗಿನ ಚರ್ಚೆಯ ಫಲಿತವೇ ಇರಬಹುದು, ಅಥವಾ, ವಿಶ್ವವ್ಯಾಪ್ತಿಯ ಸಿದ್ಧಾಂತಗಳಾಗಿರಬಹುದು. ಆದರೆ, ಕನ್ನಡ ಸಂದರ್ಭದಲ್ಲಿ ಚರ್ಚೆಯಾಗುವುದು ಅವಶ್ಯವೆಂದು, ಪುನಃ ವಿಮರ್ಶೆಗೆ ಗುರಿಮಾಡುತ್ತಿದ್ದೇನೆ. ಆ ಮೂಲಕ ಕಲಾವಿದ ಹೆಬ್ಬಾರರ ಕಲೆಯನ್ನು ಅಭ್ಯಾಸಕ್ಕೆ ಎತ್ತಿಕೊಳ್ಳುತ್ತಿದ್ದೇನೆ.

ಮೊದಲಿನದಾಗಿ, ಸಾಹಿತ್ಯದ ಭಾಷೆಗೂ, ಚಿತ್ರಕಲೆಯ ಭಾಷೆಗೂ ಇರುವ ಬಳಕೆಯ ಅಂತರದ ಬಗ್ಗೆ : ಚರಿತ್ರೆಯ ಪುಟಗಳಿಂದ ತಿಳಿದು ಬರುವುದು: ಸಾಹಿತ್ಯಕ್ಕಿಂತ ಚಿತ್ರಕಲೆ, ಅದಕ್ಕಿಂತ ಸಂಗೀತ ಅಮೂರ್ತಕಲೆ ಎಂದು, ಅತಿ ಪ್ರಾಚೀನ ಎಂದು.

ಹೀಗಿರುವಾಗ, ಸಾಹಿತ್ಯಕ್ಕಿಂತ ಚಿತ್ರಕಲೆ, ಸಂಗೀತ ಕಲೆ; ವ್ಯಕ್ತಿ-ಸಮಾಜಗಳಲ್ಲಿ ಬಳಕೆಯಾಗಿರುವುದು, ಬಹುಶಃ ಬಳಕೆಯಾಗುತ್ತಿರುವುದು ಸತ್ಯವಷ್ಟೆ. ಅವುಗಳ ಆಕೃತಿ, ಆಶಯಗಳ ಪ್ರಮಾಣ ಬೇರೆ ಬೇರೆಯಾಗಿರಬಹುದು. ಯಾವ ಶಿಷ್ಟ ಕಲೆಯಾದರು, ಸಮಾಜದ ಅಲ್ಪ ಸಂಖ್ಯೆಯವರಿಗೆ ಮಾತ್ರವೆ ಉಪಯೋಗವರ್ತಿಯಾಗಿರುವಾಗ, ಆ ಅಲ್ಪ ಸಂಖ್ಯಾತರಲ್ಲಿ ಶಿಷ್ಟ ಸಾಹಿತ್ಯ ಹೆಚ್ಚು ಬಳಕೆಯಲ್ಲಿದೆ ಎಂದು ವಾದ ಹೂಡುವುದರಲ್ಲಿ ಹುರುಳಿಲ್ಲ. ಸಂಗೀತ, ಚಿತ್ರಕಲೆಗಳಿಗಿಂತ ಸಾಹಿತ್ಯ ಅಕ್ಷರಾಭ್ಯಾಸದ ಕ್ರಮ ಕಲಿಕೆಯನ್ನೂ ಬಯಸುವುದರಿಂದ, ಸಂವಹನದ ದೃಷ್ಟಿಯಿಂದ ಕೊಂಚ ತೊಡಕೇ ಉಂಟಾಗುತ್ತದೆ. ಅಥವಾ, ಚಿತ್ರಕಲೆ ಸಂಗೀತ ಕಲೆಗಳಂತೆ ತಾನು ಬದುಕುವ ಸಮಾಜದ ನಡುವೆಯೇ ಬಳಕೆಯಿರುವ ಜಾನಪದ (ಅಥವ ಮೌಖಿಕ) ಭಾಷೆ, ತನಗೆ ತಾನೆ ಬಂದೀತು, ಕೇಳಿ ತಿಳಿದು ಕಲಿಯುವುದು ಜೀವನದ ಒಂದು ಅಗತ್ಯಕ್ರಿಯೆ ಎಂಬುದನ್ನು ಒಪ್ಪಿಕೊಂಡಾಗಲೂ, ಸಾಹಿತ್ಯವನ್ನು ಕೇಳಿಸಿಕೊಂಡು ತಿಳಿಯಬಹುದೇ ಹೊರತು, ಓದುವುದಕ್ಕೆ ಸಾಧ್ಯವಿಲ್ಲ, ಅದಕ್ಕಂತು ಶಿಕ್ಷಣ ಬೇಕೇ ಬೇಕು. ಈ ಬಗೆಯ ಶಿಕ್ಷಣ ಚಿತ್ರಕಲೆಗೆ, ಸಂಗೀತ ಕಲೆಗೆ, ಶಿಲ್ಪ ನಾಟಕಾದಿಗಳಿಗೆ ಅಗತ್ಯವೇ ಎಂಬುದರ ಬಗ್ಗೆ ನನಗೆ ಅನುಮಾನವಿದೆ. ಸಮಕಾಲೀನ ಪ್ರಪಂಚದ ದೃಶ್ಯ ಮಾಧ್ಯಮಗಳಾದ ರೇಡಿಯೊ, ಸಿನಿಮಾ, ಟಿ.ವಿ-ಗಳು ಬಂದ ಮೇಲೆ, ಸಾಹಿತ್ಯವನ್ನು ಓದುವರ ಸಂಖ್ಯೆ ಕಡಿಮೆಯಾಗಿರಬಹುದೇ, ಎಂಬ ಗುಮಾನಿ ನನಗಿದೆ. ಹೀಗಾಗಿ, ಓದಿ ಗ್ರಹಿಸ ಬೇಕಾದ ಸಾಹಿತ್ಯ ಮಾಧ್ಯಮ, ಹಿಂದಿನ ಕಾಲದಂತೆ ಗಮಕಿ-ಪ್ರವಚನಕಾರರ ಮುಖೇಣ ಗ್ರಹಿಸುವ ಸ್ಥಿತಿ ಈಗಲೂ ಬಂದಲ್ಲಿ, ಅದು ಎಷ್ಟು ಸಾಧು-ಸಾರ್ಥಕ್ಯ ಎಂಬುದರ ಬಗ್ಗೆಯೂ ನನ್ನಲ್ಲಿ ಸಂಶಯವಿದೆ. ಸಾಹಿತ್ಯ ಮಾಧ್ಯಮದ ಸಂವಹನದಲ್ಲಿ ಭಾಷೆಯ ಶಿಷ್ಟ ಶಿಕ್ಷಣವೇ ಮೊದಲ ಕೊರತೆ, ಅದರಲ್ಲೂ ಕನ್ನಡ ಸಂದರ್ಭದಲ್ಲಿ, ಎಂಬುದೂ ಒಂದು ಸಾಮಾಜಿಕ ಪ್ರಶ್ನೆ. ಆದರೆ, ಸಾಹಿತ್ಯವನ್ನು ಕೇವಲ ಶಿಷ್ಟ ಭಾಷೆಗೆ ಇಳಿಸಿ ಬಿಡದೆ ಹೇಳುವುದಾದಲ್ಲಿ, ಸಾಹಿತ್ಯ ಸಂಗೀತ ಚಿತ್ರ ಕಲೆಗಳು ಜನ ಜೀವನದ ನಡುವೆ ತಮ್ಮ ಬಾಳಿಕೆಯನ್ನು ಎಂದಿನಂತೆಯೇ ಉಳಿಸಿಕೊಂಡು ಬಂದಿವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ವೇಷ ಭೂಷಣ, ಹಬ್ಬ ಹರಿದಿನಗಳ ಆಚರಣೆ, ಮನೆ ನಿರ್ಮಾಣ ಅಲಂಕರಣ, ಅನ್ನ ನೀರು ಬಳಸುವ ವಸ್ತುಗಳಿಂದ ಹಿಡಿದು ಕಸುಬಿನ ಎಲ್ಲ ಪರಿಕರಗಳವರೆಗೆ ಚಿತ್ರ, ಶಿಲ್ಪ ಕಲೆಗಳ ಬಳಕೆ ತದನುಗುಣವಾಗಿ ಇದ್ದದ್ದೆ. (ಜೀವನಾವಶ್ಯ ವಸ್ತು ಪರಿಕರಗಳಿಗೆ 'ಸಾಹಿತ್ಯ' ಎಂಬ ಮಾತು ಬಳಕೆಯಲ್ಲಿರುವುದು ನಾನು ಕೇಳಿದ್ದೇನೆ, ಓದಿದ್ದೇನೆ. ಹೀಗೆ ಬಳಕೆಯಲ್ಲಿರುವ ಜನಾಂಗೀಯ ಶಬ್ದಗಳ ಕುರಿತ ಅಧ್ಯಯನ ಚಾರಿತ್ರಿಕವಾಗಿ ಮಹತ್ತ್ವದ್ದು.) ಸಂಗೀತವಂತು ಮಾತುಬಲ್ಲ ಮನುಷ್ಯನ ಒಂದು ಜೀವಂತ ಕ್ರಿಯೆ ಎಂಬುದರಲ್ಲಿ

ಯಾವ ಅನುಮಾನವೂ ಉಳಿದಿಲ್ಲ. ನೋವು ನಲಿವು, ಪೂಜೆ ಪುನಸ್ಕಾರ, ದುಡಿಮೆ ಉತ್ಸವ, ಹುಟ್ಟು ಸಾವು-ಗಳಲ್ಲಿ ಸಂಗೀತವಿಲ್ಲದೇ ಇಲ್ಲ. ಹೀಗೆ ವಿಚಾರ ಮಾಡುತ್ತಾ ಬಂದಾಗ, ಅದು ಚಿತ್ರಕಲೆಯಾಗಲಿ. ಸಂಗೀತವಾಗಲಿ, ಸಾಹಿತ್ಯವೇ ಆಗಲಿ-ಯಾವ ಶಿಕ್ಷಣ, ಶಿಸ್ತು, ಸಿದ್ಧಾಂತಗಳ ಪರಿಬಂಧನವಿಲ್ಲದೆಯೇ ಜನತೆ ಅವನ್ನು ಬಳಸುತ್ತಿದೆ, ಜನ ಬಳಕೆಯಲ್ಲಿ ಅವು ಉಳಿದಿವೆ ಎಂಬುದೂ ನಿಜ. ಹೀಗಿರುವಾಗ, ಚಿತ್ರಕಲೆಯ ಪರಿಭಾಷೆಯ ಸಂಪೂರ್ಣ ಅರಿವು ಜನತೆಗೆ ಇಲ್ಲದಿರುವುದು ಸಂವಹನಕ್ಕೆ ಸಮಸ್ಯೆಯಾಗಿದೆ ಎಂದು ಅನ್ನಿಸುತ್ತಿಲ್ಲ. ಅಲ್ಲದೆ, ಈ ಮಾತು ಅಮೂರ್ತ ಕಲೆಯಾದ ಸಂಗೀತಕ್ಕೆ ಅನ್ವಯಿಸುವುದಿಲ್ಲವೆ? ಸಂಗೀತಗಾರರೇಕೆ ಸಾಹಿತ್ಯದ ಮೇಲೆ ಈ ಬಗೆಯ ಆಪಾದನೆ ಹೊರಿಸುವುದಿಲ್ಲ? (ಸಂಗೀತಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧ, ತಕರಾರು ಬೇರೆ ಚರ್ಚೆ ಬಯಸುವಂಥಾದ್ದು.)

ಎರಡನೆಯದಾಗಿ, ಸಾಹಿತ್ಯದ ಪ್ರಭಾವದಿಂದ ಅಥವಾ ಬದುಕಿನ ಕ್ರಮದಿಂದ, ವ್ಯಕ್ತಿಗಳು ಚಿತ್ರಕಲೆಯಲ್ಲಿ ವಸ್ತು ರೂಪವನ್ನು ಕಾಣಬಯಸುತ್ತಾರೆ ಎಂಬುದರ ಬಗ್ಗೆ: ಈಗಾಗಲೇ. ಸಾಹಿತ್ಯ ಸಂಗೀತ ಚಿತ್ರಕಲೆಗಳು ತಮ್ಮ ಅಸ್ತಿತ್ವವನ್ನು ಆಯಾ ಸಮಾಜದಲ್ಲಿ ಪಡೆದೇ ಇರುತ್ತವೆ ಎಂದೆ. ಹೀಗಿರುವಾಗ, ಸಾಹಿತ್ಯ ಮಾತ್ರ ವಸ್ತು ಸ್ಥಿತಿಯನ್ನು ಬಯಸುತ್ತದೆ ಎಂದೋ, ಇನ್ನೊಂದು ಮಾಧ್ಯಮದ ಮೇಲೆ ಹೇರುತ್ತದೆ ಎಂದೋ ಆಪಾದಿಸುವುದರಲ್ಲಿ ಜಾಣತನವಿಲ್ಲ. (ಸಾಹಿತ್ಯದ ಮೂಲ ಸತ್ವವಾದ ಕಾವ್ಯ ಪ್ರಕ್ರಿಯೆಯೂ ಒಂದು ಅಮೂರ್ತ ಕಲೆ ಎಂಬುದನ್ನೂ ವಸ್ತುವಿನ ರೂಪಕ್ಕಿಂತ ವಸ್ತುಸ್ಥಿತಿಯನ್ನು ಸಹೃದಯನಿಗೆ ಮುಟ್ಟಿಸುವ ಸಂವಹನಕ್ರಿಯೆ ಎಂಬುದನ್ನೂ ನಾವು ಮರೆಯಬಾರದು.) ಸಾಹಿತ್ಯವಾಗಲಿ ಸಂಗೀತವಾಗಲಿ ದಿನ ಕ್ರಮೇಣ ಪ್ರಯೋಗಕ್ಕೆ ಗುರಿಯಾಗಿ ಬೆಳವಣಿಗೆಯನ್ನೊ ಅಥವಾ ಕುಂಠಿತವನ್ನೊ ಕಾಣಬಹುದು. ಈ ಏರುಪೇರಿನಲ್ಲಿ ವಸ್ತು ರೂಪ ಒಂದೇ ಸ್ಥಿತಿಯಲ್ಲಿ ಉಳಿದೇ ಉಳಿಯುತ್ತದೆ ಎಂದು ಹೇಳಬರುವುದಿಲ್ಲ. ಧರ್ಮ. ಅರ್ಥ, ಕಾಮ, ಮೋಕ್ಷಗಳ ಪಾಲಾಗಿದ್ದ ಸಮಾಜದಲ್ಲಿ. ಸಾಹಿತ್ಯವಾಗಲಿ ಇತರ ಕಲೆಗಳಾಗಲಿ ಕೇವಲ ಇಂತಹ ಒಂದು ಅವಸ್ಥೆಯಲ್ಲಿ ತನ್ನ ಪೂರ್ಣತ್ವ ಪಡೆದು ನಿಂತಿತು ಎನ್ನುವುದೂ ಅಸಂಭವ. ಇದು ಆಯಾ ಕಲೆಯ ಜನಬಳಕೆಯ ಪರಿಣಾಮವೆಂದರೂ ತಪ್ಪಿಲ್ಲ. ಹಾಗೆಂದಾಕ್ಷಣ, ಒಂದು ಕಲೆಯ ಪ್ರಭಾವ ಇನ್ನೊಂದು ಕಲೆಯ ಮೇಲೆ ಆಗಿಲ್ಲವೆಂದು ಅರ್ಥವಲ್ಲ. ಆಗಬಹುದು, ಆಗುತ್ತಿರಲೂಬಹುದು. ಆದರೆ, ಸಂಪೂರ್ಣ ಅಡ್ಡಗಟ್ಟಿದೆ, ಹತೋಟಿಯಲ್ಲಿ ಇಟ್ಟಿದೆ, ಇಟ್ಟೀತು ಎಂಬುದು ಊಹಾತೀತ ವಿಷಯ. ಈ ಆಕ್ಷೇಪಣೆಯು ಮೂಲಭೂತವಾಗಿ ಸಾಹಿತ್ಯದ ವಿದ್ಯಾರ್ಥಿಗಳನ್ನು ಕುರಿತು ಇರಬಹುದೇ ವಿನಾ ಎಲ್ಲ ಸಹೃದಯರನ್ನಲ್ಲ. ಸದ್ಯದ ರೇಡಿಯೊ, ಸಿನಿಮಾ, ಟಿ.ವಿ-ಗಳು ಸಾಹಿತ್ಯ ನಿರ್ಮಾಣ

ವನ್ನೇ ನಿರ್ಮೂಲನ ಗೊಳಿಸಲಿವೆ ಎಂದು ಉದ್‌ಗಾರ ತೆಗೆಯುಲು ಮನಸ್ಸು ಪೂರ್ತಿ ಯಾಗಿ ಸಿದ್ಧವಿಲ್ಲ. ವಾಸ್ತವ ಸ್ಥಿತಿಯೂ ಹಾಗಿಲ್ಲ. ಇನ್ನು ವ್ಯಕ್ತಿಗಳಲ್ಲಿರುವ ಮಾನಸಿಕ ಸ್ಥಿತಿಯ ಸಿದ್ಧತೆಗೆ ಕೇವಲ ವಾಣಿಜ್ಯ ಸಂಸ್ಕೃತಿಯ ಮೇಲೆಯೇ ತಪ್ಪು ಹೊರಿಸುವುದು ಸೂಕ್ತವೆ? ಶುದ್ಧ ಕಲೆಯ ಪ್ರಾಯೋಗಿಕತೆಯ ಹೆಸರಿನಲ್ಲಿಯೇ ಹಿರಿಮೆ ಕಾಣುವ ಕಲೆ-ಕಲಾವಿದರ ಜಿಗುಟುತನವೂ, ಸಮೂಹ ಸಂವಹನ ಸಾಧ್ಯತೆ ಯನ್ನು ಧಿಕ್ಕರಿಸಿ ಅಶಿಕ್ಷಿತರನ್ನಾಗಿ ಇಡುವಂತಹದ್ದಲ್ಲವೇ? (ಈಗಾಗಲೇ ಒಂದು ವರ್ಗ ಇಂತಹ ತಿಳಿಗೇಡಿ ಕ್ರಮದ ವ್ಯವಸ್ಥೆಯಿಂದಾಗಿ ತಲುಪಿದ ಅವಮಾನವೀಯಸ್ಥಿತಿ, ಚರಿತ್ರೆ ಬಲ್ಲವರಿಗೆಲ್ಲಾ ವಿವರಿಸುವ ಅಗತ್ಯವಿಲ್ಲ). ಇದು ಕೇವಲ ಸಾಹಿತ್ಯಕ್ಕೆ ಮಾತ್ರವಲ್ಲ, ಎಲ್ಲ ಕಲೆಗಳ ವಾರಸುದಾರರ ಮುಂದಿರುವ ಪ್ರಶ್ನೆಯಲ್ಲವೆ?

ಮೂರನೆಯದಾಗಿ, ಚಿತ್ರಕಲೆಯನ್ನು ನೋಡುವ ಸಿದ್ಧತೆ, ಸಾಧ್ಯತೆಗಳು ಇವತ್ತಿನ ಜನತೆಯಲ್ಲಿ ಇಲ್ಲವಾಗಿದೆ ಎನ್ನುವ ಬಗ್ಗೆ: ಬಹುಶಃ ಕಲೆಯಲ್ಲಿ ಮೂರು ಬಗೆ ಎಂದು ನಾನು ತಿಳಿಯುತ್ತೇನೆ. ಜಾನಪದ ಕಲೆ, ಶಿಷ್ಟ ಕಲೆ ಮತ್ತು ವಾಣಿಜ್ಯ ಕಲೆ. ಇವತ್ತಿನ ಮಟ್ಟಿಗೆ ಜಾನಪದ ಎಂದ ಕೂಡಲೆ, ಹೊಲ ಗದ್ದೆಗಳಲ್ಲಿ ದುಡಿಯು ವವರ ಮಧ್ಯೆ ಉಳಿದಿರುವುದು ಎನ್ನಲಿಕ್ಕೆ ಬರುವುದಿಲ್ಲ. ಅಲ್ಲಿ ಇಲ್ಲಿ ಆ ಬಗೆಯ ಜನಜೀವನ ಇದ್ದರೂ, ಒಟ್ಟಾರೆ ನಗರೀಕರಣಗೊಳ್ಳದ ಭಾಗ ವಿರಳವೆ. (ಗುಡ್ಡಗಾಡು, ಅಲೆಮಾರಿ ಜನಾಂಗಗಳನ್ನು ಬಿಟ್ಟು.) ಹೀಗಾದಾಗ, ಜಾನಪದ ಕಲೆ ಎಂದಾಗ, ಈ ತಲೆಮಾರಿಗೆ ಉಳಿದು ಬಂದ ಹಿಂದಿನ ತಲೆಮಾರುಗಳ ಕಲೆ ಎನ್ನಬಹುದು. ಇನ್ನು ಶಿಷ್ಟ ಕಲೆ: ಸಮಕಾಲೀನವಾಗಿ ಶಿಷ್ಟರಿಂದ, ಸೂಕ್ಷ್ಮಸಂವೇದನಾಶೀಲರಿಂದ, ಏಕಾಂತ ದಲ್ಲಿ ನಿರ್ಮಿತಿಗೊಂಡದ್ದು ಎನ್ನಬಹುದು. ಇನ್ನು ವಾಣಿಜ್ಯ ಕಲೆ; ಅನುದಿನದ ಜೀವನ ಬಳಕೆಗಾಗಿ ಅದರಲ್ಲಿಯೂ, ಆರ್ಥಿಕ ಸುಖ ಭೋಗಕ್ಕಾಗಿ ಹುಟ್ಟಿಕೊಂಡ ಕಲೆ ಇದು. ಈ ಮೂರು ಬಗೆಯ ಕಲೆಗಳು ನಿನ್ನೆ, ಇಂದು, ನಾಳೆಗಳಂತೆ ನಮ್ಮೊಡನೆ ಸಹ ಜೀವನ ನಡೆಸುವಂಥವು. ಮೂರಕ್ಕೂ ಪರಸ್ಪರ ಪೂರಕ ಸಂಬಂಧವಿದ್ದೂ, ಇಲ್ಲದಂತೆ ಕಣ್ಣು ಮುಚ್ಚಾಲೆಯ ಆಟ ಆಡುವಂಥಾವು. ಒಂದೇ ಕಲೆಯಲ್ಲಿ ಹೀಗೆ ಪ್ರಭೇದಗಳಿರಬಹು ದಾದಲ್ಲಿ ಯಾವ ರಂಗದವರು ಮತ್ತಾವ ರಂಗದವರನ್ನು ಹೀಯಾಳಿಸಿ ತಿರುಗಲು ಶಕ್ಯ? ಸುಲಭದಲ್ಲಿ ಎಟಕುವ ಕಲೆಯನ್ನು ಕುರಿತ ತತ್‌ಕ್ಷಣಿಕ ಪ್ರತಿಕ್ರಿಯೆ ಸಂತೋಷ ದಾಯಕವೋ ಅಪಾಯ ಗರ್ಭಿತವೋ ವಿಚಾರ ಮಾಡಬೇಕು. ಹಾಗೆಯೇ ಶ್ರಮ ಸಾಧ್ಯವಾಗಿ ದೊರಕಿಸಿಕೊಳ್ಳುವ ಕಲೆಯನ್ನು ಕುರಿತ ಪಡೆನುಡಿ ಜೀವಂತಿಕೆಯ ತಾಳಿಕೆ ಯನ್ನು ಬಾಳಿಕೆಯನ್ನು ಬಯಸುವಂಥಾದ್ದಲ್ಲವೇ ಎಂಬುದನ್ನು ವಿಚಾರ ಮಾಡ ಬೇಕು. ಕಲೆಗಳ ಎರಡು ದಡವಾದ ಸೃಜನಶೀಲರ ಮತ್ತು ಸಹೃದಯರ ಹಕ್ಕು, ಅಂತೆಯೇ ಬಾಧ್ಯತೆಗಳಿಗೆ ಸಂಬಂಧಿಸಿದ ಪ್ರಶ್ನೆ ಇದು ಎಂದು ನನ್ನ ತಿಳುವಳಿಕೆ.

ಇದಕ್ಕೆ ಯಾರು. ಯಾರಿಗೆ ಎಷ್ಟು ಶಿಕ್ಷಣ ಕೊಡಬೇಕು, ಪಡೆಯಬೇಕು ಎಂಬುದೂ ಪ್ರಶ್ನೆ. ಆಯಾ ಮಾಧ್ಯಮದವರ ಇತಿಮಿತಿಗೆ ಸಂಬಂಧಿಸಿದ್ದು ಇದು ಎನ್ನಿಸುತ್ತದೆ. ಶಿಷ್ಟಸಾಹಿತ್ಯ ಮಾಧ್ಯಮದ ಒಂದು ವ್ಯವಸ್ಥೆ ಗ್ರಹಿಸುವುದಾದರೆ ; ಟೀಕೆ ಟಿಪ್ಪಣಿ, ವ್ಯಾಖ್ಯಾನ, ವಿವರಣೆ, ವಿಚಾರ, ವಿಮರ್ಶೆ ಹೀಗೆ ಅನೇಕ ಹಂತಗಳಲ್ಲಿ ಸಹೃದಯ ಶಿಕ್ಷಣ ನಡೆದಿದೆ. ಅಂದರೇನು ಈ ಕಲಾಭ್ಯಾಸದಲ್ಲಿ ಕಲಾವಿದ, ವಿಮರ್ಶಕ, ಸಹೃದಯರ ನಡುವೆ ಅನೇಕ ಬಗೆಯ ಸಂವಾದಗಳು ನಡೆದಿವೆ. ನಡೆಯುತ್ತಿವೆ. ಇವತ್ತಿನ ಸಂಗೀತ, ಚಿತ್ರಕಲೆ ಮಾಧ್ಯಮಗಳ ಬಗೆಯ ಸಂವಾದ, ಸಹೃದಯ ಶಿಕ್ಷಣ ನಡೆಯದೇ ಇರುವಲ್ಲಿ ಕಾರಣ ಏನು ? ಕಾರಣ ಯಾರು ? ಎಂಬುದು ವಿಚಾರಣೀಯ.

ವ್ಯಕ್ತಿಯಾಗಲಿ, ಕಲೆಯಾಗಲಿ, ಒಂದು ಸಮಾಜವಾಗಲಿ-ತಾನು ಒಂದು ಪರಿಸರದಲ್ಲಿ ಹುಟ್ಟಿ ರೂಪುಗೊಳ್ಳುವುದು ನಿಜವಷ್ಟೆ. ಆ ವಾತಾವರಣದ ಎಲ್ಲ ಸೊಗಡು, ಬಸಿ, ದನಿ, ಆಕೃತಿ, ಅರ್ಥ, ನಾದ, ಲಯ, ಗತಿಗಳನ್ನು ಮೈಗೂಡಿಸಿಕೊಳ್ಳುತ್ತಲೇ, ಆಕಸ್ಮಿಕವೋ ಆಂತರಿಕ ಅನಾವರಣವೋ ಫಲಿತವಾಗಿ ಎತ್ತರಕ್ಕೆ (ಹೊರಕ್ಕೋ ?) ಜಿಗಿಯುವುದುಂಟು. ಅಂತಹ ವ್ಯಕ್ತಿ, ಕಲೆ, ಸಮಾಜದ ಏಳ್ಗೆಯಲ್ಲಿ ಅಲ್ಲಿನ ಜಾನಪದ ಅಂಶಗಳ ಕೊಡುಗೆಯೇ ಮಹತ್ವದ್ದು. ಹಾಗೆ ನೋಡಿದರೆ ಆ ವ್ಯಕ್ತಿ, ಕಲೆ, ಸಮಾಜದ ಸಿದ್ಧಿ ಸಾಧನೆಗಳಲ್ಲಿ, ಅಲ್ಲಿನ ಜಾನಪದ ಅಂಶಗಳು ಥಳುಕು ಹಾಕಿಕೊಂಡಿದ್ದು, ಅವರಿಗೆ ಕಾಣುವಂತೆ, ತಾಕುವಂತೆ, ಕಲಕುವಂತೆ ಹೊರಗಿನ ಕಣ್ಣು ಮನಸ್ಸುಗಳಿಗೆ ಮುಟ್ಟುವುದು ದುಸ್ತರ. ಹಾಗಾದಾಗಲೂ ಅದು ಕೇವಲ ಅರ್ಥ, ವ್ಯಾಖ್ಯಾನ, ವಾದಗಳಿಗೆ ಒಳಗಾಗಿ—ಪ್ರಯೋಗ ಪರಿಕರವಾಗಬಹುದೇನೋ! ಆದರೆ, ತನ್ನ ಒಡನಾಡಿಗಳಲ್ಲಿ ಮಿಡಿಯುವಂತೆ, ತುಡಿಯುವಂತೆ, ತಲ್ಲಣಗೊಳ್ಳುವಂತೆ ಆಗುವ ಜಾನಪದೋಲ್ಲಾಸ, ಸ್ವಾತಂತ್ರ್ಯ, ಸಮಾನತೆ, ಮಾನವೀಯತೆಗಳ ಸಾಕ್ಷಾತ್ಕಾರದ ಆನಂದದಂಥಾದ್ದು. ಆ ವ್ಯಕ್ತಿ, ಕಲೆ, ಸಮಾಜ ತನ್ನದೆಂದು ಅಪ್ಪಿಕೊಳ್ಳುವ ಹೃದಯ ವ್ಯಾಪಾರವೇ ಜೀವನಾನುರಾಗಿ ಧನ್ಯತೆ ತಂದುಕೊಡುವಂಥಾದ್ದು.

ಜನತೆಯಲ್ಲಿ ಒಬ್ಬನಾದ ನನ್ನ ಮತ್ತು ಚಿತ್ರಕಲೆಯ ಮತ್ತು ಕಟ್ಟಿಂಗೇರಿ ಕೃಷ್ಣ ಹೆಬ್ಬಾರರ ಕಲೆಯ ನಡುವೆ ಯಾವುದೇ ಅಂತರ ಸಮಸ್ಯೆ, ಗೊಂದಲ ಉಂಟಾಗದೇ ಇರಲು ನೆಲೆಗಟ್ಟಾಗಿ ಆಡಿದ ಮಾತುಗಳು ಇವು. ಬಹುಶಃ, ಯಾವುದೇ ಕಲೆ ಸಮಾಜ ಮತ್ತು ಸಹೃದಯರಿಗೆ ಎರವಾಗುತ್ತಿರುವುದೇ ಈ ಬಗೆಯ ತೊಡಕುಗಳನ್ನು ಹೆಚ್ಚು ಹೆಚ್ಚು ಬೆಳೆಸುತ್ತಿರುವುದರಿಂದ. ಆ ಮೂಲಕ ಅಧೀರರಾಗುತ್ತಿರುವುದರಿಂದ. ಆದರೆ, ಮಾನವ ಸಂಬಂಧಿಯಾದ ಯಾವ ಕಲೆಯನ್ನಾದರು ತನ್ನ ತೆರೆದ ಕಣ್ಣು, ಮನಸ್ಸು, ಕಾಳಜಿಗಳಿಂದ ಪರಾಂಬರಿಸಿ ಪಡಿನುಡಿಯುವಲ್ಲಿಯೇ ವ್ಯಕ್ತಿಯ, ಕಲೆಯ, ಸಮಾಜದ ಜೀವಂತಿಕೆ ಅಡಗಿದೆ ಎಂದು ಗಾಢವಾಗಿ ನಂಬಿದವನು ನಾನು.

ಚಿತ್ರಕಲೆ ಅದರಲ್ಲಿಯೂ ಹೆಬ್ಬಾರರ ಕಲೆ, ಇಂತಹ ಒಂದು ಆಹ್ವಾನವನ್ನು, ಅನುಭವೀಕರಣವನ್ನು ನಮಗೆ ನೀಡುವುದರಲ್ಲಿ, ನನ್ನಂಥವನೂ ಮಾತಾಡುವಂತೆ ಮಾಡುವಲ್ಲಿಯೇ ಹೆಚ್ಚಳವಿದೆ...ಎಂಬುದು ನಾನು ಹೇಳ ಹೊರಟ ಮುಖ್ಯ ವಿಚಾರ ಗಳಲ್ಲಿ ಮೊದಲಿನದು.

ಹೆಬ್ಬಾರರು ಕರ್ನಾಟಕದಲ್ಲಿ ಹುಟ್ಟಿ, ಬೊಂಬಾಯಿಯಲ್ಲಿ ಬೆಳೆದು, ವಿಶ್ವವನ್ನು ಕಂಡವರು. ತಾವು ಹುಟ್ಟಿದ ಹಳ್ಳಿ, ಮನೆಯ ವಾತಾವರಣದ ಧಾರ್ಮಿಕತೆ ; ಆ ಪ್ರದೇಶದ ವರ್ಣರಂಜಿತ ವನ ಸಂಪತ್ತು ; ಜಾನಪದೀಯ ಯಕ್ಷಗಾನ ಕಲಾವಂತಿಕೆ ; ಬಡತನವಿದ್ದು ಮೇಲು ವರ್ಗದ ಸಹಜಾತ ಶಿಕ್ಷಣದ ಆಶೋತ್ತರಗಳನ್ನು ತಮ್ಮ ಸೃಜನಶೀಲ ದ್ರವ್ಯಗಳನ್ನಾಗಿ ದುಡಿಸಿಕೊಂಡ ಹಿರಿಮೆ ಅವರದ್ದು.

ಅಂತೆಯೇ, ಕಲಾ ಶಿಕ್ಷಣದ ಮೂಲಕ ಸ ದೇಶಿಯರಿಂದ, ವಿದೇಶೀಯರಿಂದ ಕಲಾಪಂಥಗಳ ಮರ್ಮಗಳನ್ನು ಅರಗಿಸಿಕೊಂಡವರು ಹೆಬ್ಬಾರರು. ವಾಸ್ತವ ಕಲಾ ಪಂಥದಿಂದ ಅಮೂರ್ತ ಕಲಾಪಂಥದವರೆಗೆ ತಮ್ಮ ಜಾಡು ಸವೆಸಿದವರು ಅವರು.

ನಮ್ಮವರೇ ಆದ ಕಲಾ ವಿಮರ್ಶಕ ಜಿ. ವೆಂಕಟಾಚಲಂ, 1948ರಲ್ಲಿಯೇ ಹೀಗೆ ನುಡಿದಿದ್ದಾರೆ : "ಹೆಬ್ಬಾರರು ಕಲೆಯಲ್ಲಿ ಆಧುನಿಕರು, ಹೃದಯದಲ್ಲಿ ಪ್ರಾಚೀನರು... ಅವರ ಕಲೆಯಲ್ಲಿ ಪ್ರಾಮಾಣಿಕತೆ, ಸಮತೂಕ ಅಷ್ಟೇ ಅಲ್ಲ, ಅರ್ಥ ಮತ್ತು ತಿಳಿವು ಎರಡೂ ಇದೆ. ಅವರು ಆಧುನಿಕರಾಗಿರುವುದು ಕಲೆಯ ಯಾವುದೇ ಕಟ್ಟುಪಾಡು ಗಳಿಗೆ ಒಳಪಡಬಾರದೆಂಬ ಅವರ ನಿಲುವಿನಿಂದ. ಯಾವುದೇ ಕಡೆಯಿಂದ ಹೊಸತನ್ನು ಸ್ವೀಕರಿಸಲು ಹಿಂಜರಿಯುವುದಿಲ್ಲ ಎಂಬುದರಿಂದಾಗಿ." ('ಕಟ್ಟಿಂಗೇರಿ ಕೃಷ್ಣ ಹೆಬ್ಬಾರ ಕಲೆ ಮತ್ತು ಬದುಕು,' ಕು.ಶಿ. ಹರಿದಾಸ ಭಟ್ಟ, ಪುಟ 182)

ಈ ಮಾತುಗಳಿಗೆ ಪುರಾವೆಯಾಗಿ, ಪುಸ್ತಕ ರೂಪದಲ್ಲಿ (ಕೆ.ಕೆ. ಹೆಬ್ಬಾರ ರೇಖಾ ಚಿತ್ರಗಳು ಮತ್ತು ವರ್ಣ ಕೃತಿಗಳು, ನಳಂದ ಪಬ್ಲಿಕೇಷನ್, ಬಾಂಬೆ, 1947) ಪ್ರಕಟವಾಗಿರುವ ಕೃತಿಗಳನ್ನೇ ಇಲ್ಲಿ ಎತ್ತಿಕೊಳ್ಳಬಹುದು : 'ಕಲಾವಿದ ಮತ್ತು ತಾಯಿ' 'ಡ್ರಮ್ಮರ್', 'ಕನ್ಯಾಕುಮಾರಿ', 'ಪ್ರೀತಿ', 'ಉತ್ಸವನೃತ್ಯ', 'ದನಗಳ ಸಂತೆ', 'ಋತುಮತಿಗೆ', 'ದಕ್ಷಿಣದ ಬೇಗೆ' (Sunny South) 'ಗೋಸೇವೆ', 'ಪಂಡಿತರು' ಈ ಕೃತಿಗಳಲ್ಲಿನ ಜಾನಪದ ಶೈಲಿ, ಧಾರ್ಮಿಕ ಆವರಣ-ಆಚರಣೆ, ವರ್ಣರಂಜಿತ ಅಲಂಕರಣ. ಭಾವ ಪರಿಣಾಮ ಪಂಥ—ಇವುಗಳ ತೀವ್ರ ಅನುಭವವನ್ನು ನಾವು ಕಾಣಬಹುದು. ಮುಖ್ಯವಾಗಿ, ಅಲ್ಲಿನ ವರ್ಣ ಮತ್ತು ರೇಖೆಗಳ ಪ್ರಖರ ಸಂಯೋಜನೆ ಮತ್ತು ವಿವಿಧ ಮಾಧ್ಯಮಗಳ ಪ್ರಯೋಗಶೀಲತೆ ಕಣ್ಣಿಗೆ ಕಟ್ಟು ವಂಥಾದ್ದು. 'ಒಂದು ರೇಖಾ ಚಿತ್ರ', ಬಹುಶಃ ತಮ್ಮ ಹೆಂಡತಿಯೊಂದಿಗಿನ

'ಸ್ವಚಿತ್ರಣ'. 'ಪಾಟ್ಸ್ ಅಂಡ್ ಪಾನ್ಸ್'-ಗಳಲ್ಲಿನ ರೇಖಾ ವಿನ್ಯಾಸ, ಅಲ್ಲಿನ ಶೀರ್ಷಿಕೆಗಳು ಮಹತ್ವಾಕಾಂಕ್ಷೆಯ ಕಲಾವಿದನ ಬರುವನ್ನು ತನಗೆ ತಾನೇ ಸಾದರಪಡಿಸುತ್ತವೆ.

ಸರಿಯೆ. ಜಾನಪದ, ಧಾರ್ಮಿಕ, ಕಲಾಪಂಥಗಳ ಪ್ರಯೋಗಶೀಲತೆಗೆ ತಮ್ಮನ್ನು ತೆತ್ತುಕೊಂಡ ಕಲಾವಿದ ಹೆಬ್ಬಾರರ ಮೇಲೆ ಆಗಿನ ಮಹಾ ಯುದ್ಧಗಳು, ವಸಾಹತುಶಾಹಿ ಆಡಳಿತ ಕ್ರಮ, ಜನತೆಯ ಪಾರತಂತ್ರ್ಯ ಸ್ಥಿತಿ; ರಾಷ್ಟ್ರೀಯ ಏಕತೆಗಾಗಿ ಜನತೆ ನಾನಾ ನೆಲೆಯಲ್ಲಿ ಕೈಗೊಂಡ ಹೋರಾಟ. ಭಾಷೆ ಪ್ರಾಂತ್ಯ ಜಾತಿ ಕುಲ ಮತಗಳ ತಾಕಲಾಟ-ಇವಾವುವೂ ಸೂಕ್ಷ್ಮ ಸಂವೇದಿ ಕಲಾವಿದನಾದವನ ಮೇಲೆ ಪ್ರಭಾವ ಬೀರೇ ಇಲ್ಲವೇ? ಈ ಆವರಣದಿಂದ ಕಲಾವಿದ ನಿಂತು ಸೃಷ್ಟಿಕ್ರಿಯೆಯಲ್ಲಿ ತೊಡಗಲು ಸಾಧ್ಯವೆ? ಕಲಾವಿದನೊಳಗಿನ ವ್ಯಕ್ತಿ, ಆ ವ್ಯಕ್ತಿ ಬದುಕಿರುವ ಸಮಾಜ-ಹೀಗೆ ಬೇರ್ಪಡಿಸಿಕೊಳ್ಳಲು ಆದೀತೆ? ಕಲೆ ಮತ್ತು ತನ್ನ ವೈಯಕ್ತಿಕ ಕಲಾತ್ಮಕ ಬೆಳವಣಿಗೆಯಲ್ಲಿಯೇ ಏಕಾಗ್ರ ಮನಸ್ಸು ನೆಟ್ಟುಕೊಂಡ ಕಲಾವಿದನ. ವರ್ಣ ಮತ್ತು ವರ್ಗಗಳ ಮಿತಿ ಹೀಗೆ ಉಳಿಸಲು ಕಾರಣವಾಗಿರಬಹುವಲ್ಲವೆ? ಅಥವಾ ಸರ್ವಕಾಲಿಕ ವಾದದರ ಬಗೆಗಿನ ಆಸಕ್ತಿಯು ಸಮಕಾಲೀನ ತುಡಿತಗಳಿಗೆ ಮುಸುಕು ಹಾಕಿರಬಹುದೇ?

ಹೀಗಿದ್ದು, ದಿನಕ್ರಮೇಣ ಬೆಳೆಯುತ್ತ ಬಂದ ಕಲಾವಿದ ಹೆಬ್ಬಾರರು, ಚಿತ್ರ ಕಲಾರಂಗದಲ್ಲಿ ಒಂದು ಹೊಸದಿಕ್ಕು ಚೈತನ್ಯಗಳಿಗೆ ಕಾರಣರಾದದು ಸುಳ್ಳಲ್ಲ. ರೇಖೆ ಮತ್ತು ವರ್ಣಗಳಲ್ಲಿ ಹಾಡು—ಸಂಗೀತಗಳ ಲಯ ಗತಿ ವಿನ್ಯಾಸ ತಂದದ್ದೇ ಈ ಮಾತಿಗೆ ಸಾಕ್ಷಿ. ನೋಡುವ ಕಣ್ಣಿಗೆ ಕೂಡಲೇ ಇದು ಹೆಬ್ಬಾರರ ಕೃತಿಯಲ್ಲವೇ ಎಂಬುವ ಮಟ್ಟಿಗೆ ಪಡೆದ ಸಿದ್ಧಿ ಸಾಮಾನ್ಯವಾದುದೇನಲ್ಲ.

ಹಲವು ರೇಖಾ ಚಿತ್ರಗಳೇ ಅಲ್ಲದೆ ('ಅಂಬಿಕಾತನಯದತ್ತ'ರ "ಒಲವೇ ನಮ್ಮ ಬದುಕು" ಕಾವ್ಯ ಸಂಪುಟಕ್ಕೆ ರಚಿಸಿರುವ ರೇಖಾ ಚಿತ್ರಗಳನ್ನು ಇಲ್ಲಿ ನೆನೆಯುತ್ತೇನೆ.) 'ವೀಣಾನಾದ', 'ಪಕ್ಕ ವಾದ್ಯ ಸಂಗೀತ', 'ರಂಗದ ಮೇಲೆ'. 'ಪುಂಗಿ', 'ಸಮರನೃತ್ಯ' 'ಸಂಗೀತ'-ಈ ಬಗೆಯ ಕೃತಿಗಳಲ್ಲಿ, ರೇಖೆಗಳಾಗಲಿ ವರ್ಣಗಳಾಗಲಿ ತಮ್ಮ ಗುಣವನ್ನು. ಆಲ್ಲಿನ ಮಾಧ್ಯಮದ ಆಯಾಮವನ್ನು ಒಳ ಸರಿಸಿಕೊಂಡು. ಕೇವಲ ನಾದ ಲಯ ಗತಿಗಳ ತನ್ಮಯಾಕೃತಿಯಾಗಿ ಅವತಾರವೆತ್ತುತ್ತವೆ. ಹೀಗಾಗಿ. ರೇಖೆ ವರ್ಣ ಮಾತ್ರವೇ ಅಲ್ಲ, ಆ ಮಾಧ್ಯಮವೇ ಹಾಡುತ್ತದೆ, ಕುಣಿಯುತ್ತದೆ.

ಕಲಾವಿದ ಹೆಬ್ಬಾರರೇ ತಮ್ಮನ್ನು ಒಂದೆಡೆ ಹೀಗೆ ಕಂಡರಿಸಿದ್ದಾರೆ "ಭಾರತೀಯ ನೃತ್ಯ ಮತ್ತು ಸಂಗೀತ ನನಗೆ ಇಷ್ಟ. ಎಳವೆಯಲ್ಲಿ ಸುಮಾರು ಎರಡು ವರ್ಷಗಳ ಕಥಕ್ ನೃತ್ಯವನ್ನು ಅಭ್ಯಾಸ ಮಾಡಿದ್ದೆ ನಾನು. ಈ ತರಬೇತಿ ನನ್ನ ಕೃತಿಗಳಲ್ಲಿ 'ಲಯ' ಬದ್ಧತೆಯನ್ನು ಅಳವಡಿಸಲು ತುಂಬಾ ಅನುಕೂಲ ಮಾಡಿಕೊಟ್ಟಿತು. 1970ರಲ್ಲಿ ಯೆಹೂದಿಮೆನುಹಿನ್ ಅವರ ಸಂಗೀತ ಕೇಳುತ್ತಿದ್ದಂತೆ ಧ್ವನಿಯನ್ನು ವರ್ಣ ಮಧ್ಯಮದಲ್ಲಿ ಚಿತ್ರಿಸುವ ಸ್ಫೂರ್ತಿಯುಂಟಾಯಿತು....ನನ್ನದು ಬಣ್ಣಗಳ ಪ್ರಕಟಣಾ

ಸಾಮುಖ್ಯವನ್ನು ಕ್ಯಾನ್ವಾಸಿನಲ್ಲಿ ಸಂಗೀತದ ಧ್ವನಿಗಳನ್ನು ತೋರಿಸಲು ಬಳಸುವ ತಂತ್ರ ವಾಗಿತ್ತು. ಸಂಗೀತದಲ್ಲಿ ನಾನು ಕಂಡುಕೊಂಡದು ಧ್ವನಿಯಲ್ಲ. ಅದರ ಮಾಧುರ್ಯ, ಲಯ, ಧ್ವನಿಯ ಕಂಪನಗಳನ್ನು; ಸಂಗೀತವನ್ನು ನಾನು ನನ್ನಲ್ಲಿ ಆವರಿಸಿಕೊಂಡೆ, ನನ್ನ ಸ್ವಂತಿಕೆಯ ಇರವನ್ನು ಮರೆತೆ, ಸುತ್ತಣ ಪ್ರಪಂಚವನ್ನು ಮರೆತೆ. ಆದರೆ ನನ್ನ ಮೆಚ್ಚಿನ ವಸ್ತು, ಪ್ರಪಂಚದಲ್ಲಿ ಇದೆ ಎಂಬ ಅರಿವನ್ನು ಉಳಿಸಿಕೊಂಡೆ. ಸಂಗೀತವನ್ನು ಕಣ್ಣಿನಲ್ಲಿ ಕಾಣುವ ರೀತಿ ನನ್ನದಾಗಿತ್ತು." (ಅದೇ ಪುಸ್ತಕದ ಪುಟ 203)

ಹೀಗೆ ಕಲಾಕೃತಿ ನಿರ್ಮಾಣಕ್ಕಾಗಿ ಆವಾಹಿಸಿಕೊಂಡು, ಸುತ್ತಣ ಪ್ರಪಂಚವನ್ನು ಮರೆತು, ಮೆಚ್ಚಿನ ವಸ್ತು-ಪ್ರಪಂಚದಲ್ಲಿ ಇದೆ ಎಂಬ ಅರಿವನ್ನು ಉಳಿಸಿಕೊಂಡ ಕಲಾವಿದ ಹೆಬ್ಬಾರರು; ಬಡತನವನ್ನು ಕುರಿತು, ವೈಶ್ಯಾವೃತ್ತಿಯನ್ನು ಕುರಿತು, ಪೊಲಸುತನ, ಹಿಂಸಾಕಾಂಡ, ವೈಜ್ಞಾನಿಕ ಸಾಧನೆ, ಕ್ರಮೇಣ ಪಂಚಭೂತಗಳ 'ಆಧ್ಯಾತ್ಮಿಕ ಅನುಭವಗಳನ್ನು ಕುರಿತು ತಮ್ಮ ಕಲಾಪ್ರಯೋಗ ನಡೆಸಿದ್ದಾರೆ. ಭಿಕ್ಷುಕರು', ವೈಪರೀತ್ಯ', 'ಬಡತನ'. 'ವೈಶ್ಯೆ', 'ಕಪ್ಪುಗೋಡೆ', 'ಜಾಡಮಾಲಿ', 'ಹಂಚಿನ ಕಾರ್ಖಾನೆ', 'ಜೀವನ ಕಥಾನಕ', 'ಮಹಾತ್ಮರ ಮರಣ', 'ಅಂತಿಮದರ್ಶನ' 'ಮಹಾಪೂರ', 'ಕೋಳಿ ಅಂಕ', 'ಮೈ-ಲೆ ವಿಯಟ್ನಾಂ', 'ರಾಕೆಟ್', 'ಆಕಾಶ', 'ವಧುಗಳು', 'ಸ್ವರ್ಗಮರ್ತ್ಯ', 'ಶಾಂತಿ', 'ನಂಬಿಕೆ', 'ಜೀವನ ಮತ್ತು ಮರಣ', 'ಶಕ್ತಿ'. 'ಸರ್ಚ್', 'ಪಂಚಭೂತಗಳ ಮಾಲಿಕೆ'—ಈ ಎಲ್ಲ ಮೂರ್ತ, ಅಮೂರ್ತ ಕೃತಿಗಳ ವ್ಯಾಕರಣ ಏನೇ ಇರಲಿ; ಕಲಾವಿದ ಹೆಬ್ಬಾರರು ಪ್ರಯೋಗಕ್ಕಾಗಿಯೇ ಸಮಾಜ, ವಿಜ್ಞಾನ, ಸಂಸ್ಕೃತಿ ಕೊನೆಗೆ ಆಧ್ಯಾತ್ಮ ನಿಗೂಢತೆಗಳನ್ನು ಶೋಧಿಸುವ ಪ್ರಯತ್ನ ಕಾಡು ಬರುತ್ತದೆ.

ಒಟ್ಟಾರೆ ಒಂದು ಕೃತಿಯೊಳಗೆ ಒಬ್ಬ ಕಲಾವಿದನ ಸಮಗ್ರ ಕಾಳಜಿಗಳು ಮೈ ದಳೆಯಬೇಕೆಂಬ ಅತಿ ಮಹತ್ವಾಕಾಂಕ್ಷೆ ನನ್ನದಲ್ಲ. ಚಿತ್ರಕಲೆಯ ಸಂದರ್ಭದಲ್ಲಿ ಇದು ಇನ್ನಷ್ಟು ಜಟಿಲವೆಂಬ ಅರಿವು ನನಗಿದೆ. ಆದಕ್ಕೆ, ಮನುಷ್ಯನ ಅಸ್ತಿತ್ವದ ಸಮಗ್ರ ಆಳ ಅಗಲಗಳಿಗೆ ವೈಚಾರಿಕವಾಗಿ, ಭಾವನಾತ್ಮಕವಾಗಿ ಕಲಾವಿದ ಹೆಬ್ಬಾರರು ತಮ್ಮನ್ನು ತಾವು ಒಡ್ಡಿಕೊಂಡಿದ್ದಾರೆ ಎನ್ನುವುದಕ್ಕೆ, ಹಾಗೆಯೇ ಅದನ್ನು ಕಲೆಯಾಗಿ ಕಂಡರಿಸಿ ದ್ದಾರೆ ಎನ್ನುವುದಕ್ಕೆ ಪುರಾವೆಗಳು ದೊರಕುತ್ತಿಲ್ಲ ಎನ್ನುವುದು ನನ್ನ ಅನ್ನಿಸಿಕೆ.

---

**ಆಧರಿಸಿದ ಕೃತಿಗಳು:** 1) Hebbar-A Nalanda Publication 1947 2) Hebbar–Lalit Kala Akademi, India,? 3) ಒಲವೆ ನಮ್ಮ ಬದುಕು-ಅಂಬಿಕಾತನಯದತ್ತ, 1977 4) ಕಲಾ ಪ್ರಪಂಚ-ಶಿವರಾಮ ಕಾರಂತ, 1978, 5) ಹೆಬ್ಬಾರ್-ಎನ್. ಮರಿಶಾಮಾಚಾರ್, 1983 6) ಕೆ.ಕೆ. ಹೆಬ್ಬಾರ್_ ಎನ್. ಮರಿಶಾಮಾಚಾರ್ 1987 7) ಕಟ್ಟಿಂಗೇರಿ ಕೃಷ್ಣಹೆಬ್ಬಾರ ಕಲೆ ಮತ್ತು ಬದುಕು—ಕು.ಶಿ. ಹರಿದಾಸ್‌ಭಟ್ಟ, 1988.

# ಬಂಡಾಯ ಸಾಹಿತ್ಯ ಚಳವಳಿ 10 ವರ್ಷಗಳು

ಪ್ರಶ್ನೆಗಳು : 1) "ಖಡ್ಗವಾಗಲಿ ಕಾವ್ಯ : ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ"—ಈ ಘೋಷಣೆ ಬಂಡಾಯ ಸಾಹಿತ್ಯದ ಹತ್ತು ವರ್ಷಗಳ ಬೆಳವಣಿಗೆಯಲ್ಲಿ ಕಲಾತ್ಮಕ ಸಾರ್ಥಕತೆ ಪಡೆದಿದೆಯೆ ?

2) "ಸಾಹಿತ್ಯದಲ್ಲಿ ಜನಪರ ಆಲೋಚನಾ ವಿಧಾನಕ್ಕೆ ಬಂಡಾಯ ಸಾಹಿತ್ಯ ಚಳುವಳಿಯು ಕೊಡುಗೆ ಅರ್ಥ ಪೂರ್ಣ"—ಎಂಬ ಮಾತನ್ನು ಸಮರ್ಥಿಸಬಹುದೆ ?
ಎ) ಹೌದಾದರೆ ಹೇಗೆ ?
ಬಿ) ಇಲ್ಲವಾದರೆ ಕಾರಣ ?

3) ಪ್ರಗತಿಶೀಲ ಸಾಹಿತ್ಯ ಮತ್ತು ಬಂಡಾಯ ಸಾಹಿತ್ಯದ ನಡುವೆ ವಸ್ತು ಮತ್ತು ಬಂಧಗಳಲ್ಲಿ ಸಾಮ್ಯವಿದೆಯೆ ? ನಿಮ್ಮ ಅಭಿಪ್ರಾಯವೇನು ?

4) ವಿವಿಧ ಸಾಹಿತ್ಯ ಪ್ರಕಾರ ಮತ್ತು ಚಳುವಳಿಗಳನ್ನು ಪ್ರತ್ಯೇಕ ಮಾನದಂಡಗಳಿಂದಲೇ ಪರಿಶೀಲಿಸಬೇಕೆಂಬ ವಾದದ ಹಿನ್ನೆಲೆಯಲ್ಲಿ ಬಂಡಾಯ ಸಾಹಿತ್ಯದ ವಿಮರ್ಶೆಗೆ ಹಿಂದಿನ ಮಾನದಂಡಗಳು ಸೂಕ್ತವಲ್ಲ ಎಂಬ ಅಭಿಪ್ರಾಯ ವಿದೆ—ಈ ಬಗ್ಗೆ ನಿಮ್ಮ ನಿಲುವೇನು ?

5) ಬಂಡಾಯ, ಸಾಹಿತ್ಯ ಚಳವಳಿ ಸೈದ್ಧಾಂತಿಕವಾಗಿ ಬೆಳೆ ದಷ್ಟು ಸಾಹಿತ್ಯಕವಾಗಿ ಬೆಳೆದಿಲ್ಲ ಎಂಬ ಟೀಕೆಯಿದೆ— ನಿಮ್ಮ ಅಭಿಪ್ರಾಯವೇನು ?

6) ಬಂಡಾಯ ಸಾಹಿತ್ಯದಿಂದ "ಶ್ರೇಷ್ಠ ಕೃತಿ" ಬಂದಿಲ್ಲ ಎಂಬ ಟೀಕೆ ಸರಿಯೆ ?

# ವಿಮರ್ಶಾ ಮಾನದಂಡಗಳ 'ಹತಾರಗಳು' ಬದಲಾಗಬೇಕು

—ಶಿವರಾಮು ಕಾಡನಕುಪ್ಪೆ

1. 'ಖಡ್ಗವಾಗಲಿ ಕಾವ್ಯ ; ಜನರ ನೋವಿಗಾಗಿ ಮಿಡಿವ ಪ್ರಾಣ ಮಿತ್ರ' ಎಂಬ ಘೋಷಣೆಯ ಮೂಲಕ ಬಂಡಾಯ ಸಾಹಿತ್ಯ ಚಳವಳಿ ರೂಪುಗೊಂಡಿತು ಎಂದು ತಿಳಿಯುವುದು ತಪ್ಪು. ಬಂಡಾಯ ಸಾಹಿತ್ಯ ಚಳವಳಿ ವಾಸ್ತವಾಗಿ ತಲ ತಲಾಂತರ ವರ್ಷಗಳಿಂದ ಅದುಮಿಟ್ಟ ಅಭಿವ್ಯಕ್ತಿಯ ಒಂದು ರೂಪು. ಮೇಲಿನ ಘೋಷಣೆ–ಚಳವಳಿ ಅಭಿವ್ಯಕ್ತಿ ಪಡೆವ ಸಂದರ್ಭದಲ್ಲಿ, ಸಾಕಾರ ತಳೆಯುವ ಸಂದರ್ಭ ದಲ್ಲಿ, ಬಂದದ್ದು ಅಷ್ಟೆ. ಇದರ ಸಾರ್ಥಕತೆಯ ಪ್ರಶ್ನೆ : ಇದೊಂದು ಪ್ರತಿಮಾ ವಿಧಾನವಾಗಿ ಗದ್ಯಪದ್ಯಗಳಲ್ಲಿ ರೂಪು ಪಡೆದಾಗ ಉದ್ಭವಿಸುತ್ತದೆ. ಅದುಮಿಟ್ಟ ಅಭಿವ್ಯಕ್ತಿಯ ರಭಸದಲ್ಲಿ 'ಕಲಾತ್ಮಕತೆ' ಸ್ವಲ್ಪ ಕಷ್ಟವಾಗುತ್ತದೆ. ಅದಕ್ಕಾಗಿ ಕಾಯ ಬೇಕು, ಮಾಗಬೇಕು.

2. ಜನಪರ ಆಲೋಚನಾ ವಿಧಾನಕ್ಕೆ ಈ ಚಳವಳಿಯ ಕೊಡುಗೆಯನ್ನು ಇದರ ವಿರೋಧಿಗಳೂ ಕೂಡ ಒಪ್ಪಿಕೊಳ್ಳಬೇಕು. ವಸ್ತು ನಿಷ್ಠವಾಗಿ ಆಲೋಚಿಸಿ ದಾಗ ಕಳೆದ ಹತ್ತು ವರ್ಷಗಳಲ್ಲಿ ಯಾವ ಕಲಾತ್ಮಕ ರಂಗವೂ ಈ ಚಳವಳಿಯ ಪ್ರಭಾವ ದಿಂದ ತಪ್ಪಿಸಿಕೊಂಡಿಲ್ಲ. ನಾಟಕ, ಚಿತ್ರಕಲೆ, ಸಂಗೀತದಂಥ ಕಲಾಮಾಧ್ಯಮಗಳು ಕೂಡ ಈ ಚಳವಳಿಯ ಆಶಯ ಮತ್ತು ಗುರಿಗಳ ನಿಟ್ಟಿನಿಂದ, ಚೌಕಟ್ಟಿನಿಂದ ಆಲೋಚಿಸುತ್ತಿರುವುದು ಒಂದು ಅರ್ಥಪೂರ್ಣ ಕೊಡುಗೆಯಲ್ಲದೆ ಏನು ? ಕಾರಣ ಇಷ್ಟೆ : ಕಲಾ ಮಾಧ್ಯಮಕ್ಕೆ, ಮುಖ್ಯವಾಗಿ ಸಾಹಿತ್ಯದಲ್ಲಿ ಹೊಸ ಪ್ರತಿಮೆಗಳನ್ನು, ಬದುಕಿನ ಅಲೆಗಳನ್ನು, ಕಂಡರಿಯದ ರಭಸವನ್ನು, ಅಷ್ಟೇ ನಿಶ್ಶಬ್ದ ಶಾಂತತೆಯನ್ನು, ಎಲ್ಲಕ್ಕಿಂತಲೂ ಮಿಗಿಲಾಗಿ ಹೊಸ ಪಾರಿಭಾಷೆಯನ್ನು ಸಾಹಿತ್ಯಕ್ಕೆ ತಂದು ಕೊಟ್ಟದ್ದು.

3. ಪ್ರಗತಿಶೀಲ ಸಾಹಿತ್ಯ ಪ್ರಮುಖವಾಗಿ ಕಮ್ಯುನಿಸಂನ ಪ್ರಭಾವದಿಂದ ನಮ್ಮಲ್ಲಿ ಬೆಳೆದು ಬಂತು. ಜನಪರ ಆಶಯಗಳನ್ನೇ ಅದು ಕೂಡ ಬಂಡಾಯ ಚಳವಳಿಯ ರೀತಿಯಲ್ಲಿ ಹೇಳಿತು. ಆದರೆ ಬಂಡಾಯ ಕಮ್ಯುನಿಸಂ ಒಂದರಿಂದ ಪ್ರಭಾವಿತವಾದ ಚಳವಳಿ ಅಲ್ಲ. ಇದು ಲೋಹಿಯಾವಾದ, ಅಂಬೇಡ್ಕರ್ ವಾದ,

ಗಾಂಧಿ ವಾದ ಮತ್ತು ಮಾರ್ಕ್ಸ್-ಲೆನಿನ್ ವಾದಗಳಿಂದ ಪ್ರಭಾವಿತವಾದ ಅತ್ಯಂತ ವಿಶಿಷ್ಟ ಆತ್ಮ-ರೂಪಗಳನ್ನು ಪಡೆದ ಚಳವಳಿ ಪ್ರಗತಿಶೀಲ ಚಳವಳಿ. ಮುಖ್ಯವಾಗಿ ನಗರ ಕೇಂದ್ರಿತ, ಬಂಡವಾಳ ಶಾಹಿತನದ ವಿರುದ್ಧ ಬಂಡೇಳುವ ಮಧ್ಯಮ ವರ್ಗದ ಅಶೋತ್ತರಗಳನ್ನು ಮಾತ್ರ ಹೇಳುತ್ತದೆ. ಬಂಡಾಯ ಚಳವಳಿ ಎಲ್ಲ ದುಡಿಯುವ ವರ್ಗದ, ಶೋಷಿತ-ದಲಿತ ವರ್ಗದ, ಮುಖ್ಯವಾಗಿ ಗ್ರಾಮಾಂತರ ಬದುಕಿನ ವರ್ಗ ಮತ್ತು ವರ್ಣ ತಾರತಮ್ಯದ ವಿರುದ್ಧ ಬಂಡೇಳುವ ಅಭಿವ್ಯಕ್ತಿಯನ್ನೂ ಪಡೆಯುತ್ತಿದೆ. ಜೊತೆಗೆ ದಲಿತ-ಶೋಷಿತ ಬದುಕಿನಲ್ಲಿ ಮನೆ ಮಾಡಿಕೊಂಡಿರುವ ಅಜ್ಞಾನ-ಅನಕ್ಷರತೆ ಗಳನ್ನು ನಿವಾರಿಸಿ, ಪ್ರಜ್ಞೆ ಮೂಡಿಸುವ, ನೆಲತಲದಿಂದ ಬದಲಾವಣೆ ಬಯಸುವ ಬಯಕೆಯನ್ನು ಇಟ್ಟುಕೊಂಡಿದೆ. ಪ್ರಗತಿಶೀಲರ ನೋವು ನಿವಾರಣೆಯ ಆಶಯ ಆದರ್ಶದಿಂದ ಮೂಡಿ ಬಂದದ್ದು. ಆದರೆ ದಲಿತ-ಬಂಡಾಯದ ಬದಲಾವಣೆಯ ಆಶಯ ಎದೆಯಿಂದ ಮೂಡಿ ಬಂದದ್ದು ; ದುಡಿಮೆಯ ಕಣದಿಂದ, ಬದುಕಿನಿಂದ ತಾನು ತಾನಾಗಿ ಎದ್ದುಬಂದದ್ದು. ಮೇಲು ನೋಟಕ್ಕೆ ಶೋಷಣೆಯ ವಿರುದ್ಧ ಮಾತನಾಡುವ ಇವೆರಡೂ ಚಳವಳಿಗಳು ಒಂದೇ ತೆರನಾಗಿ ಕಂಡು ಬಂದರೂ ಅಂತ ರಂಗದ ತೊಡಗಿಸಿಕೊಳ್ಳುವಿಕೆಯಲ್ಲಿ ಅತ್ಯಂತ ಭಿನ್ನವಾಗಿವೆ.

ಇನ್ನು ಬಂಧದ ಮಾತು. 'ರೂಪ'ದ ಪ್ರಶ್ನೆ ; ದಲಿತ ಬಂಡಾಯದ ಲೇಖಕರು ಪ್ರಗತಿಶೀಲರಿಗಿಂತ ನವೋದಯಕ್ಕೆ ಹತ್ತಿರಾದ ಜನ-ಅಭಿವ್ಯಕ್ತಿಯ ವಿಷಯ ಬಂದಾಗ. ಪ್ರಗತಿಶೀಲರು ಪದ್ಯ ಬರೆದದ್ದು ಕಡಿಮೆ. ಅವರ ಗದ್ಯಕ್ಕೆ ಸಂವಹನ ದೃಷ್ಟಿ ಪ್ರಧಾನ ವಾದ್ದರಿಂದ ಉದ್ದೇಶ ಪೂರ್ಣವಾಗಿ ಪ್ರಾದೇಶಿಕತೆಯನ್ನೂ ಗೆದ್ದರು. ಆದರೆ ದಲಿತ ಬಂಡಾಯದ ಲೇಖಕರು ಬದುಕನ್ನು ಅದು ಇರುವ ತೆರವೇ ಅಭಿವ್ಯಕ್ತಿಸುವ ಆಶಯ ದಿಂದ ಪ್ರಾದೇಶಿಕತೆಯನ್ನೂ ಬಿಟ್ಟುಕೊಡಲಿಲ್ಲ. ಪದ್ಯದ ಬಂಧದ ವಿಷಯದಲ್ಲಂತೂ ನವೋದಯದ ಅನೇಕ ಪದ್ಯಗಳ ರೂಪ, ಇಲ್ಲಿ ಎದ್ದುಕಾಣುತ್ತದೆ. ಇರುವ ವ್ಯತ್ಯಾಸ: ಆಶಯದಲ್ಲಿ. ಅಭಿವ್ಯಕ್ತಿಯ ಸಾಚಾತನ. ತಾಚಾತನದಲ್ಲಿ ನವೋದಯದ ರಚನೆಯಲ್ಲಿ ಕಂಡು ಬರುವ ಆದರ್ಶ ಬಂಡಾಯದಲ್ಲಿ ವಾಸ್ತವವಾಗಿ ಬಿಡುತ್ತದೆ. ಈ ಕಾರಣದಿಂದ ಬಂಡಾಯದ ರಚನೆಗಳಲ್ಲಿ ಅಥೆಂಟಿಸಿಟಿ ಹೆಚ್ಚು.

4. ಬಂಡಾಯ ಸಾಹಿತ್ಯದ ವಿಮರ್ಶೆಗೆ ಪ್ರತ್ಯೇಕ ಮಾನದಂಡಗಳು ಬೇಕು ಎಂದರೆ-ಅತ್ಯಂತ ಸರಳವಾಗಿ ವ್ಯಾಖ್ಯಾನ ಮಾಡಿದಂತಾಗುತ್ತದೆ. ಇದು ನಿಜ-ಪ್ರತಿ ಯೊಂದು ಸಾಹಿತ್ಯ ಚಳವಳಿಯೂ ತನ್ನ ಹಿಂದಿನ ಸಾಹಿತ್ಯ ಪಂಥಕ್ಕಿಂತ ಭಿನ್ನವಾದ ಆತ್ಮ ಮತ್ತು ಬಂಧಗಳನ್ನು ಪಡೆದಿರುತ್ತದೆಯಾದ್ದರಿಂದ ವಿಮರ್ಶೆ ಮಾನದಂಡ ಗಳನ್ನೂ ಪ್ರತ್ಯೇಕವಾಗಿ ಬಯಸುತ್ತದೆ. ನಮ್ಮ ಹಳಗನ್ನಡ ಕೃತಿಗಳನ್ನೂ ಅಳೆಯುವ ಹಾಗೆ ವಚನ ಸಾಹಿತ್ಯವನ್ನು ನೋಡುವ ಹಾಗೆ ಕುಮಾರ ವ್ಯಾಸನನ್ನು ನೋಡಲಾಗುವು

ದಿಲ್ಲ. ಕುಮಾರವ್ಯಾಸ ಇನ್ನೇನನ್ನೋ ಬಯಸುತ್ತಾನೆ. ವಿಮರ್ಶಾ ಮಾನದಂಡಗಳು ಕಾಲ ಮತ್ತು ಕವಿ ಪ್ರತಿಭೆಯ ಎದುರು ತಮ್ಮ 'ಹತಾರಗಳನ್ನು' ಬದಲಿಸಿಕೊಳ್ಳಬೇಕಾಗುತ್ತದೆ.

ಬಂಡಾಯ ಸಾಹಿತ್ಯವು ಕೂಡ ತನ್ನ ಹಿಂದಿನ ಎಲ್ಲ ಸಾಹಿತ್ಯಕ ಚಳವಳಿಗಳಿಂದ, ವಿಮರ್ಶಾ ಪಂಥಗಳಿಂದ ವಿಮರ್ಶೆಗೊಳ್ಳಬೇಕಾಗಿದೆ. ಹೀಗೆ ವಿಮರ್ಶಿಸಿಕೊಂಡೂ ವಿಶಿಷ್ಟವಾಗಿ ನಿಂತಾಗ ಅಥವಾ ವಿಮರ್ಶೆಗೆ ದಕ್ಕದೆ ನಿಂತಾಗ, ತನ್ನಿಂದಲೇ ವಿಮರ್ಶಾ ಮಾನ ದಂಡಗಳನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಈ ಬಗ್ಗೆ ಇಲಿಯೆಟ್‌ನು ಹೇಳಿರುವ ಮಾತು ಸತ್ಯ.

ಆದರೆ ಬಂಡಾಯ ಸಾಹಿತ್ಯಕ್ಕೇ ಅಂತ ಪ್ರತ್ಯೇಕ ವಿಮರ್ಶಾ ಮಾನದಂಡಗಳು ಅಗತ್ಯವಿದೆಯೆಂದು ನನಗನಿಸುವುದಿಲ್ಲ. ಪ್ರತ್ಯೇಕ ವಿಮರ್ಶಾ ಮಾನದಂಡಗಳನ್ನು ಬಯಸುವಂಥ ಕೃತಿ ಸಮೂಹ ನಮಗೆ ದೊರಕಿಲ್ಲ. ಏಕೆಂದರೆ ಎಡ ಪಂಥೀಯ ಜನಪರ ಆಶಯಗಳ ಮೇಲೆ ನಿಂತಿರುವ ಈ ಚಳವಳಿಯನ್ನು ವಿಮರ್ಶಿಸಲು ಸಾಮಾಜಿಕ ದೃಷ್ಟಿಕೋನವಿರುವ ವಿಮರ್ಶಾ ಮಾನದಂಡಗಳು ಸಾಕು. (ಸಾಮಾಜಿಕ ಎಂದರೆ ರಾಜಕೀಯ, ಆರ್ಥಿಕ ಅಂಶಗಳೂ ಸೇರಿ.)

5. ಬಂಡಾಯ ಸಾಹಿತ್ಯಕ ಚಳವಳಿ ಶುದ್ಧ ಸಾಹಿತ್ಯಿಕ ಸಂಘಟನೆಯಲ್ಲ ಎಂಬುದನ್ನು ಅರ್ಥಮಾಡಿಕೊಂಡಾಗ ಈ ಟೀಕೆಗೆ ಅರ್ಥವಿಲ್ಲವೆಂಬುದು ಗೊತ್ತಾಗುತ್ತದೆ. ಸಮಾಜದ ಎಲ್ಲ ಮಗ್ಗಲನ್ನು ವಿಮರ್ಶಿಸಿ, ಸಮಾನ ಸಮಾಜ ಸೃಷ್ಟಿಗೆ ಹಾತೊರೆವ ಈ ಸಂಘಟನೆ ಸೈದ್ಧಾಂತಿಕವಾಗಿ ಹೆಚ್ಚು ಮಾತಾಡಿದ್ದರೆ, ಅದು ತಪ್ಪೇನಲ್ಲ. ಮೊದಮೊದಲು ಸಿದ್ಧಾಂತ ಘೋಷಣೆ ರೂಪದಲ್ಲಿ ಅಥವಾ ಸಿದ್ಧಾಂತವೇ ಸಾಹಿತ್ಯಿಕ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಂಡಿದ್ದರೆ, ಅದರಿಂದ ತಲೆ ಏನೂ ಹೋಗುವುದಿಲ್ಲ. ಕಲೆ ಎಂಬುದು ಈ ಸೈದ್ಧಾಂತಿಕ ರೂಪದ ಒಡಲೊಳಗಿನಿಂದಲೇ ನಿಧಾನವಾಗಿ ರೂಪುಗೊಳ್ಳುತ್ತದೆ. ಅದಕ್ಕೆ ಕಾಲಬೇಕು, ಅವಕಾಶಬೇಕು.

6. ಬಂಡಾಯ ಸಾಹಿತ್ಯದಿಂದ ಶ್ರೇಷ್ಠಕೃತಿ ಬಂದಿಲ್ಲ ಎಂದು ಟೀಕಿಸುವುದು ಆತುರದ ಮಾತಾಗುತ್ತದೆ. ಇನ್ನೂ ಸರಿಯಾಗಿ ಹತ್ತು ವರ್ಷ ತುಂಬಿರುವ ಈ ಚಳವಳಿ, ತನ್ನ ಪ್ರಾರಂಭಿಕ ದಿನಗಳಲ್ಲಿ ಸಾಹಿತ್ಯ ಸೃಷ್ಟಿಗಿಂತ ಪ್ರಧಾನವಾಗಿ ಸಾಮಾಜಿಕ ಚಳವಳಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿತು. ಈಗ ಒಂದು ಶಾಬ್ದಿಕ ದಾಪಕ್ಕೆ ಬರುತ್ತಿರುವ ಸೂಚನೆಗಳು ಕಂಡು ಬರುತ್ತಿವೆ.

---



---

# ಕುವೆಂಪು ಅವರ ಸಾಹಿತ್ಯವೆಲ್ಲವೂ ಜನಪರವಾದದ್ದೇ

—ಬಸವರಾಜಕಟ್ಟೀಮನಿ

1. ನಿಜ.

2. ಸಮರ್ಥಿಸಬಹುದು ; ಕೆಲವು ಮಹತ್ವದ ಕೃತಿಗಳ ಮೂಲಕ.

3. ಪ್ರಗತಿಶೀಲ ಸಾಹಿತ್ಯ, ಬಂಡಾಯ ಸಾಹಿತ್ಯದ ತಾಯಿಯಿದ್ದಂತೆ.

4. ವಿಮರ್ಶೆಯ ಮಾನದಂಡ ಬದಲಾಗುವುದು ಸರಿ ; ಪೂರ್ವಾಗ್ರಹ ಪೀಡಿತ ಬರವಣಿಗೆ ವಿಮರ್ಶೆ ಆಗಲಾರದು.

5. ಸ್ವಲ್ಪ ಮಟ್ಟಿಗೆ ನಿಜ. ಯಾವ ಸಾಹಿತ್ಯಕ ಚಳವಳಿಯೂ ಕಲೆಯನ್ನು ಕೊಲ್ಲಲು ಹೊರಡಬಾರದು.

6. ಸರಿಯಲ್ಲ ; ಅನೇಕ ಕೃತಿಗಳು ಬಂದಿವೆ. ಬಲ್ಲಾಳರ 'ಬಂಡಾಯ'ವೇ ಬಂದಿದೆ. ಚದುರಂಗರ 'ವೈಶಾಖ' ಇತ್ಯಾದಿ........

* * * *

ಶ್ರೀ ಹಂಪನಾ ಅವರು ದಲಿತ ಸಾಹಿತ್ಯ ಕಡೆಗಣಿಸಿ ಮಾತನಾಡಿದ್ದರಿಂದ 'ಬಂಡಾಯ ಚಳವಳಿ' ಆರಂಭವಾಯಿತು. ಆಗಲೇ ನಾನು ಅವರಿಗೆ ತಿಳಿಹೇಳಿ, ಧರ್ಮಸ್ಥಳ ಸಾಹಿತ್ಯ ಸಮ್ಮೇಳನದಲ್ಲಿಯೇ 'ದಲಿತ ಸಾಹಿತ್ಯ ಗೋಷ್ಠಿ' ನಡೆಸುವಂತೆ ಮಾಡಿದೆ. ಆ ಗೋಷ್ಠಿಗೂ ನಾನು ಉದ್ಘಾಟಕ ನಾಗಿದ್ದೆ. ಯು. ಆರ್. ಅನಂತಮೂರ್ತಿ ಅಧ್ಯಕ್ಷರಾಗಿದ್ದರು. ಹಂಪನಾ ತಮ್ಮ ಮಾತುಗಳನ್ನು ನುಂಗಬೇಕಾಯಿತು. ಅನಂತರ ಶ್ರೀಮತಿ ಕಮಲಾ ಹಂಪನಾ ಅವರೇ ಬಂಡಾಯ ದಲಿತ ಸಾಹಿತ್ಯ ಚಳವಳಿಯ ಬಗ್ಗೆ ಮಾತಾಡಿದರು, ಬರೆಯುತೊಡಗಿದರು. ಈಗ 'ದಲಿತ' 'ಬಂಡಾಯ' ಎಂದು ಎರಡು ಟಿಸಿಲು ಮೂಡಿವೆ. ಚಳವಳಿಗಳೆಂದರೆ ಹೀಗೇ. ಒಟ್ಟಿನಲ್ಲಿ 'ಬಂಡಾಯ'ದಿಂದ ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯ ಜನರ, ದಲಿತರ ದಟ್ಟ ದರಿದ್ರರ ಜೀವನ ವಿಶೇಷವಾಗಿ ಬರತೊಡಗಿದ್ದು ಇತಿಹಾಸ. ಶ್ರೀಮತಿ ಗೀತಾ ನಾಗಭೂಷಣ, ಸುಕನ್ಯಾ ಮಾರುತಿ,

ರಮಜಾನದರ್ಗಾ, ಶಂಕರ ಕಟಗಿ ಇತ್ಯಾದಿ ಬಂಡಾಯ ಲೇಖಕರು, ಕವಿಗಳು, ಕಾದಂಬರಿಕಾರರೂ ಕಾಣಿಸಿಕೊಂಡರು. ಆದರೆ, ಆ ಮೊದಲೂ ಡಾ॥ ಬೆಸಗರಹಳ್ಳಿ ರಾಮಣ್ಣನವರಂಥ ಜನಪರ ಒಲವಿನ ಕಥೆಗಾರರು ಇದ್ದರು. ರಾಷ್ಟ್ರಕವಿ ಕುವೆಂಪು ಅವರ ಸಾಹಿತ್ಯವೆಲ್ಲವೂ ಜನಪರವಾದದ್ದೇ. ಬಂಡಾಯ ಚಳವಳಿ ಆರಂಭವಾಗುವ ಮೊದಲೇ ಸಿದ್ಧಲಿಂಗಯ್ಯ ಪರಿಣಾಮಕಾರಿಯಾದ ಬಂಡಾಯ ಕಾವ್ಯ ರಚಿಸಿದ್ದರು. ಈಗ ಅದನ್ನು 'ದಲಿತ ಕಾವ್ಯ' ಎನ್ನುವುದು ತಪ್ಪು. ಸಿದ್ಧಲಿಂಗಯ್ಯ ಬರೆದದ್ದು ಎಲ್ಲ ಬಡವರ ಪರವಾಗಿ. ಶ್ರೀ ಕುವೆಂಪು ಅವರ ತರುವಾಯ ಸಿದ್ಧಲಿಂಗಯ್ಯ ನವರೇ ನಂ. 2. ಅವರಷ್ಟು ಭಕ್ತಿಪೂರ್ವಕವಾಗಿ ಬಂಡಾಯದವರಲ್ಲಿ ಬೇರೆ ಯಾರೂ ಬರೆದಿಲ್ಲ. ಕಾವ್ಯ ನಿಜವಾದ ಖಡ್ಗ ಆದದ್ದು ಸಿದ್ಧಲಿಂಗಯ್ಯನವರ ಕೈಯಲ್ಲಿ.

## "ತಾತ್ವಿಕ ಗೊಂದಲ, ಬೌದ್ಧಿಕ ಅರಾಜಕತೆಯಿಂದ ಸಂಘಟನೆಗೆ ನಿಯಂತ್ರಣವಿಲ್ಲ"

**ಡಾ॥ ಆರ್ಕೆ**

1. ಕಾವ್ಯ ಖಡ್ಗವೂ ಆಗಲಿಲ್ಲ ; ಪ್ರಾಣಮಿತ್ರವೂ ಆಗಲಿಲ್ಲ. ಸಂಘಟನೆಯ ಹುಟ್ಟಿನ ಸಂದರ್ಭದಲ್ಲಿ ಮೊಳಗಿದ ಈ ಘೋಷಣೆ ಕಾಲಾನುಕ್ರಮದಲ್ಲಿ ಮೂರ್ತರೂಪ ಪಡೆಯದ ಯುಟೋಪಿಯನ್ ಕಲ್ಪನೆಯಾಗಿ ಅಸಹ್ಯವಾಗಹತ್ತಿತು. ಈ ಹತ್ತು ವರ್ಷದಲ್ಲಿ ಒಂದೇ ಒಂದು ಮಹತ್ವದ (ಬಂಡಾಯ ಪ್ರಕಾರದ) ಕಲಾಕೃತಿ ಬಂದಿಲ್ಲ. ಕ್ರಮೇಣ ಬಂದೀತು ಎಂಬ ಆಶಾವಾದ ಉಳಿಸಿಕೊಂಡಾಗ್ಯೂ ಈ ಶೂನ್ಯತೆಯನ್ನು ಮುಚ್ಚಿಹಾಕುವುದು ಸರಿಯಲ್ಲ.

2. ಜನಪರ ಆಲೋಚನಾ ವಿಧಾನ, ಸಾಹಿತ್ಯದಲ್ಲಿ ಬಂಡಾಯ ಸಾಹಿತ್ಯ ಚಳವಳಿಯಿಂದಲೇ ರೂಪುಗೊಂಡಿತು ಎನ್ನುವಂತಿಲ್ಲ. ಈ ಚಳವಳಿಯೇ ಸ್ವತಃ ಈ ಆಲೋಚನಾ ವಿಧಾನದ ಒಂದು ನಿಷ್ಪನ್ನವೆನ್ನುವುದು ಹೆಚ್ಚು ಸೂಕ್ತ. ಬಹಂಮಟ್ಟಿಗೆ ನಮ್ಮ ಸಾಹಿತ್ಯ, ಲಾಗಾಯ್ತಿನಿಂದಲೂ ಜನಪರವಾದ ನಿಲುವುಗಳನ್ನು–ಅಖಂಡವಾಗಿ ಅಲ್ಲವಾದರೂ-ಅಲ್ಲಲ್ಲಿಯಾದರೂ ಬಿಂಬಿಸಿದ್ದುಂಟು. ಆದರೆ ಈ ನಿಲುವುಗಳನ್ನು ಪ್ರಮುಖ ವೈಚಾರಿಕ ನೆಲೆಗಟ್ಟಾಗಿ ಮಾಡಿಕೊಂಡು ಸಾಹಿತ್ಯರಚನೆ

ಮಾಡುವ ಘೋಷಣೆ ನಡೆದುದು ಈ ಚಳವಳಿಯ ಸಂದರ್ಭದಲ್ಲಿ ಎನ್ನಬಹುದು. ಪ್ರಗತಿಪಂಥ, ನವೋದಯ ಕಾಲದ ಉದಾರ-ಮಾನವತಾವಾದಿ ಒಲವುಗಳು, ನವ್ಯೋತ್ತರ ಕಾಲದ (ಅಂದರೆ ಸು. 1970 ರಿಂದೀಚಿನ) ಪ್ರಗತಿಪರ ಮೌಲ್ಯಗಳು ; ಮತ್ತು ಸಂಘಟನೆಗಳು-ಮುಖ್ಯವಾಗಿ ಸಮುದಾಯ, ದಲಿತ ಸಂಘರ್ಷ ಸಮಿತಿ ಮತ್ತು ಎಡಪಂಥೀಯ ರಾಜಕೀಯ ಪಕ್ಷಗಳು—ಇವೆಲ್ಲಾ ಬಂಡಾಯ ಸಾಹಿತ್ಯ ಸಂಘಟನೆಯ ಹುಟ್ಟಿನ ಹಿಂದೆ ನಿಂತು ಕೆಲಸ ಮಾಡಿವೆ. ಸ್ಪಷ್ಟವಾಗಿ ಹೇಳಬೇಕಾದರೆ ದೀನ ದಲಿತರು, ದುಡಿಯುವ ವರ್ಗದ ಸಂವೇದನೆ ಮತ್ತು ಹೆಣ್ಣು ಕೂಡ ದಲಿತ ಜನಾಂಗದಂತೆ ಶೋಷಿತಳು ಎಂಬ ಅರಿವಿನೊಂದಿಗೆ ಸಾಹಿತ್ಯರಚನೆಯಾದುದಕ್ಕೂ ಇಂಥ ಪ್ರಗತಿಪರ ಸಂಘಟನೆಗಳಿಗೂ ಸಂಬಂಧವಿದೆ. ಚದುರಂಗರ 'ವೈಶಾಖ' ಕಾದಂಬರಿ ಇಂಥ ಅರಿವನ್ನು ಮೈಗೂಡಿಸಿಕೊಂಡುದುದರ ಫಲ. ಜತೆಗೇ ಇನ್ನೊಂದು ಮಾತನ್ನು ಇಲ್ಲಿ ದಾಖಲಿಸಬಹುದು. ಹೆಣ್ಣಿನ ಶೋಷಣೆಯ ಕುರಿತಾದ ಜಾಗೃತಿಯೊಂದಿಗೆ ಹೆಚ್ಚು ಹೆಚ್ಚು ಸಂವೇದನಾಶೀಲ ಬರೆಹಗಾರ್ತಿಯರು ಇಂದು ಬರೆಯುವಂತಾದುದು ಕೂಡ ಇಂಥ ಸಂಘಟನೆಗಳಿಂದಾದ ಪ್ರಯೋಜನವೆನ್ನಲು ಅಡ್ಡಿಯಿಲ್ಲ.

3. ಪ್ರಗತಿಶೀಲ ಮತ್ತು ಬಂಡಾಯ ಸಾಹಿತ್ಯದ ನಡುವೆ ವಸ್ತು-ಬಂಧಗಳೆರಡರಲ್ಲೂ ಬಹುಮಟ್ಟಿಗೆ ಸಾಮ್ಯ ಉಳಿದುಕೊಂಡಿದೆ. ನಾವು ಒಪ್ಪಿಕೊಂಡ ರಾಜಕೀಯ ಸಿದ್ಧಾಂತಗಳು ಎಷ್ಟೇ ಜನಪರವಾಗಿರಲಿ, ಅವುಗಳನ್ನು ಮೈಗೂಡಿಸಿಕೊಂಡು ಅವುಗಳಿಗೆ ಸೂಕ್ಷ್ಮವೂ ನವೀನವವೂ ಆದ ಆಕೃತಿಯನ್ನು ಕಲ್ಪಿಸಬೇಕಾದರೆ ವಿಶಿಷ್ಟವಾದ ಪ್ರತಿಭೆ ಬೇಕು. ಕೆಟ್ಟ ಆಕೃತಿಯನ್ನು ಹೊಂದಿದ ಕಲಾಕೃತಿ ಒಳ್ಳೆಯ ರಾಜಕೀಯ ಸಿದ್ಧಾಂತವನ್ನು ಎತ್ತಿಹಿಡಿದರೂ ಅದು ಕೆಟ್ಟ ರಾಜಕೀಯ ಕೃತಿ ಎನ್ನುವುದು ಇದಕ್ಕೇ. (ಈ ಬಗ್ಗೆ ಎಸ್. ವೆಂಕಟರಾಂ ಅವರ ವಿಮರ್ಶಾಲೇಖನಗಳನ್ನೂ ಪರಿಶೀಲಿಸಬಹುದು) ಪ್ರಗತಿಪಂಥೀಯರು ಮಾರ್ಕ್ಸ್‌ವಾದವನ್ನು ಹಿಡಿದವರಾದರೂ, ದೀನ ದಲಿತರ ವಿಷಯದಲ್ಲಿ ವಿಪರೀತ ಕಳಕಳಿ ಹೊಂದಿದವರಾದರೂ, ಅವರ ಕಳಕಳಿ ಅವರನ್ನು ಉದಾರವಾದಿ—ಸುಧಾರಣಾವಾದಿ ನೆಲೆಯಿಂದ ದೂರಕ್ಕೆ ಕೊಂಡೊಯ್ಯಲಿಲ್ಲ. ಭಾಷೆಯ ಸೂಕ್ಷ್ಮಮುಖಗಳನ್ನು, ಕಸುಬುಗಾರಿಕೆಯನ್ನು, ಕೃತಿಯ ಬಂಧವನ್ನು ಅವರು (ಕೆಲಮಟ್ಟಿಗೆ ನಿರಂಜನ—ಕಟ್ಟೀಮನಿಯವರನ್ನು ಅಪವಾದವೆನ್ನಬಹುದು) ಅಷ್ಟು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಇದಕ್ಕೆ ಅವರ ರಾಜಕೀಯ ನಿಲುವುಗಳು ಯಾಂತ್ರಿಕ (mechanical) ಮತ್ತು ಮೇಲು ಮೇಲಿನ (superficial) ನೆಲೆಯದ್ದಾಗಿದ್ದುದೇ ಕಾರಣವೆನ್ನಬಹುದು. ಪ್ರಗತಿಪಂಥೀಯರು ಒಳ್ಳೆಯ ಕಾವ್ಯ ನೀಡಲಿಲ್ಲ ; ನಾಟಕ ಪ್ರಕಾರದ ಸಾಧ್ಯತೆಯನ್ನೇ ಕಡೆಗಣಿಸಿದರು ಎಂಬುವಕ್ಕೆ ಅವರ ಈ ವೈಚಾರಿಕತೆಯ ಮಿತಿಯನ್ನೇ ಹೊಣೆಗಾರ

ಪಾಗಿಸಬೇಕಾಗಿದೆ. ಬಂಡಾಯದವರು ಪ್ರಗತಿಪಂಥೀಯರಿಗಿಂತ ಗಂಭೀರವಾದ ಕ್ರಾಂತಿಕಾರಿ ಒಲವುಗಳುಳ್ಳವರೆಂದು ಘೋಷಿಸಿಕೊಂಡರೂ, ಅವರ ಈ ಘೋಷಣೆ ಅವರ ಕಲಾಕೃತಿಗಳಲ್ಲಿ ನಿಜಾರ್ಥದಲ್ಲಿ ಸಾರ್ಥಕ್ಯ ಪಡೆದಿಲ್ಲ. ಯಾಂತ್ರಿಕವಾದ, ರೋಮ್ಯಾಂಟಿಕ್ ಆದ ಸಮಾಜವಾದಿ ಘೋಷಣೆಗಳಿಗಿಂತ ಗತಿತಾರ್ಕಿತವಾದ, ಐತಿಹಾಸಿಕವಾದ ಭೌತವಾದಿ ನಿಲುವುಗಳು ಇಂಥ ಬದ್ಧ ಸಾಹಿತ್ಯದ ಅಸ್ತಿತ್ವವನ್ನು ಸಮರ್ಥಿಸುವಂತಾಗಬೇಕು ಅನ್ನುವವ ನಾನು. ಪ್ರಗತಿಪಂಥೀಯರಂತೆ ಬಂಡಾಯ ದವರೂ ನಾಟಕ ಪ್ರಕಾರವನ್ನು ಗಂಭೀರವಾದ ಮಾಧ್ಯಮವನ್ನಾಗಿ ಪರಿಗಣಿಸಲಿಲ್ಲ. ಕಾವ್ಯವನ್ನು ಪ್ರಮುಖ ಅಭಿವ್ಯಕ್ತಿ ವಿಧಾನವನ್ನಾಗಿ ಬೆಳೆಸಿದರಾದರೂ ಇಲ್ಲಿ ವೈವಿಧ್ಯ ವಾಗಲಿ, ಹೇಳಿಕೊಳ್ಳುವ ಬಂಧದ ಶೋಧವಾಗಲಿ, ಆವಿಷ್ಕಾರವಾಗಲಿಲ್ಲ. ಕಾವ್ಯದ ನಂತರ ಗದ್ಯಪ್ರಕಾರದಲ್ಲಿ ಕತೆ-ಕಾದಂಬರಿಗಳು ಸಾಕಷ್ಟು ಬಂದಿದ್ದರೂ ಇಲ್ಲೂ ನವ್ಯದ ಬಂಧ ; ಇಲ್ಲವೇ ವಾಸ್ತವವಾದಿ ಪರಂಪರೆಯ ಸಾಂಪ್ರದಾಯಿಕ ಬಂಧ ; ಪ್ರಗತಿಪಂಥ ಕ್ಕಿಂತ ಹೆಚ್ಚು ಜಾನಪದೀಯ ಒಲವು ಬಂಡಾಯದವರಲ್ಲಿ ಕಾಣಿಸುತ್ತಿದೆ. ಆದರೆ, ಇದು ಇವರ ತಾತ್ವಿಕತೆಯಲ್ಲಿ ಬೆರೆತು ಬಂದಿರುವ ನವ್ಯದವರ ಹಳಹಳಿಕೆಯ ರೂಪಾಂತರವೇ ಆಗಿರಬಹುದೆಂಬ ಆತಂಕಕ್ಕೆ ಎಡೆಯಿದೆ. ಜಾನಪದದ ಆರಾಧನೆ ಮತ್ತೆ ನಮ್ಮನ್ನು ವೈಚಾರಿಕವಾಗಿ ಹಳೆಯ ಆಕೃತಿಗಳನ್ನು ಅಪ್ಪಿಕೊಳ್ಳುವಂತೆ ಮಾಡುವುದು ನಮ್ಮ ವೈಚಾರಿಕತೆಯ ಆಕೃತಿಪರ ಅತಂತ್ರತೆ ಅರಾಜಕತೆಗಳ ಪ್ರತೀಕ ವೆನಿಸುವುದಿಲ್ಲವೇ ? ಜನಪದ ಸಾಹಿತ್ಯದ ಆಕೃತಿಗೂ ಊಳಿಗಮಾನ್ಯ ಸಮಾಜದ ಆಕೃತಿಗೂ ಸಂಬಂಧವಿರುವುದರಿಂದ, ಬಂಡವಾಳಶಾಹಿ ಸಮಾಜದ ಸಂವೇದನೆಗಳಿಗೆ ಜನಪದ ಆಕೃತಿ ತೊಡಿಸುವುದು ಹಿಂಜರಿತದ (ರಿಗ್ರೆಸ್ಸಿವ್) ಒಲವುಗಳನ್ನೇ ಎತ್ತಿ ಹಿಡಿಯುತ್ತದೆ. 'ಕೆರೆಗೆ ಹಾರ'ದ ಆಕೃತಿ ಕೈಗಾ ವಿರೋಧಿ ಚಳವಳಿಕ್ಕೆ, 'ಗೋವಿನ ಹಾಡಿ'ನ ಆಕೃತಿ ಪರಿಸರ ರಕ್ಷಣೆಯ ವೈಚಾರಿಕ ಚೌಕಟ್ಟಿಗೆ ಹೊಂದಬಹುದೇ ? ನಮ್ಮ ಆಕೃತಿಪರ ಉದ್ಯಮರಾಹಿತ್ಯವನ್ನು,ದಾರಿದ್ರ್ಯವನ್ನು ಮುಚ್ಚಿಕೊಳ್ಳುವುದು ಜಾನಪದದ ಮುಖವಾಡದಿಂದ ಎಂದಾದರೆ ಮಾತನಾಡಲು ಏನೂ ಉಳಿಯುವುದಿಲ್ಲ.

4. ಸಾಹಿತ್ಯ ವಿಮರ್ಶೆ ಅಂತಿಮವಾಗಿ ಮಾಡಬೇಕಾದ ಕೆಲಸವಾದರೂ ಸಾಹಿತಿಯ ಅನುಭವ ಎಷ್ಟರಮಟ್ಟಿಗೆ ಕೃತಿಯಲ್ಲಿ ಅನನ್ಯ ಆಕೃತಿ ಪಡೆದು ಕೊಂಡಿದೆ ಎಂಬುದನ್ನು ಅಂತಸ್ಥ ಪುರಾವೆಗಳೊಂದಿಗೆ ಶೋಧಿಸುವುದರ ಜತೆಗೇನೆ ಐತಿಹಾಸಿಕವಾಗಿ ನಿರ್ದಿಷ್ಟ ಕೃತಿಯ ಸ್ಥಾನವನ್ನು ಸಾಧ್ಯವಾದಷ್ಟು ಮಟ್ಟಿಗೆ ನಿರ್ದೇಶಿಸು ವುದು. ನವ್ಯವಿಮರ್ಶಕರು ರೂಪಾಂಶಕ್ಕೆ, ಭಾಷೆಯ ಬಳಕೆಗೆ ಹೆಚ್ಚು ಮಹತ್ವಕೊಟ್ಟ ರಾದುದರಿಂದ,ನವ್ಯವಿಮರ್ಶಾ ಮಾನದಂಡಗಳನ್ನು ನವ್ಯೋತ್ತರ ಸಾಹಿತ್ಯವಿಮರ್ಶೆಯಲ್ಲಿ ಬಳಸಿದರೆ ಕೃತಿಗೆ ಅನ್ಯಾಯವಾಗಬಹುದು ಎಂಬ ಶಂಕೆಯಿದೆ. ಆದರೆ, ಜವಾಬ್ದಾರಿ

ಯಾರಿತ ವಿಮರ್ಶಕ ಯಾವ ವಿಮರ್ಶಾ ಪರಿಕರಗಳನ್ನು ಬಳಸಿಕೊಂಡರೂ ಕೃತಿಯ ಆಂತಸ್ಸತ್ವವನ್ನು ಸೂಯಾಮ ತ್ರನ್ಧಿಗಳಿಂದ ಅಭ್ಯಸಿಸಿ ವಿಶ್ಲೇಷಿಸುತ್ತಾನೆ ; ಬೆಲೆಗಟ್ಟುತ್ತಾನೆ. (ಗೋವಿಂದಪ್ಪನ ಕವನವನ್ನು, ಮಹಾದೇವನ ಕತೆಕಾದಂಬರಿಗಳನ್ನು ಪ್ರಾಯೋಗಿಕ ಮತ್ತು ಬದ್ಧ ವಿಮರ್ಶಾ ವಿಧಾನಗಳ ಸೂಕ್ತ ಬಳಕೆಯಿಂದ ನಾನು ವಿಶ್ಲೇಷಿಸಿದ್ದೇನೆ. ಇದರಿಂದ ಆ ಆಕೃತಿಗಳ ಅನುಭವ ದ್ರವ್ಯಕ್ಕೆ ಹಾಗೂ ಅವು ಪಡೆದ ಆಕೃತಿಯ ಅನನ್ಯತೆಯ ಸ್ವರೂಪಕ್ಕೆ ಯಾವ ಧಕ್ಕೆಯೂ ಒದಗಲಿಲ್ಲ ಅಂದುಕೊಂಡಿದ್ದೇನೆ. ಅಷ್ಟೇ ಅಲ್ಲದೆ, ಇತರ ವಿಮರ್ಶಕರು ಗಮನಿಸಲಾಗದ ಕೆಲವು ಸೂಕ್ಷ್ಮ ಸಂಗತಿಗಳನ್ನು ಶೋಧಿಸುವುದು ಈ ವಿಧಾನದಿಂದ ಸಾಧ್ಯವಾಗಿದೆ ಎಂಬುದನ್ನು ಈ ಬರೆಹಗಳನ್ನು ವಿಮರ್ಶಿಸಿದ ವಿಮರ್ಶಕರು ಗುರುತಿಸಿದ್ದಾರೆ). ವಿಮರ್ಶೆ ಗತಿತಾರ್ಕಿಕ ಹಾಗೂ ಐತಿಹಾಸಿಕ ಭೌತವಾದಿ ನೆಲೆಯಿಂದ ತನ್ನ ವೈಚಾರಿಕ ತಳಗಟ್ಟನ್ನು ಕಂಡುಕೊಳ್ಳಬೇಕೆನ್ನುವವ ನಾನು. ಈ ನಿಟ್ಟಿನಿಂದ ಜಿ. ರಾಜಶೇಖರ್, ಡಿ.ಆರ್.ನಾಗರಾಜ ಮತ್ತು ಕೆ.ವಿ. ನಾರಾಯಣರ ವಿಮರ್ಶೆ ಗಮನಾರ್ಹವಾದುವು. ಇಲ್ಲೂ ಒಂದು ಆಕ್ಷೇಪವಿದ್ದೇ ಇರುತ್ತದೆ. ಸಮಕಾಲೀನ ಸಾಹಿತ್ಯವನ್ನು ಬದ್ಧ ಅಥವಾ ಗತಿತಾರ್ಕಿಕ ವಿಧಾನದಿಂದ ವಿಮರ್ಶಿಸಿದಂತೆ ಪ್ರಾಚೀನ ಕೃತಿಗಳನ್ನೂ ವಿಮರ್ಶಿಸಿದರೆ ಆ ಕೃತಿಗಳಿಗೆ ಅಪಚಾರವಾಗುವುದಿಲ್ಲವೇ ಎಂಬುದೇ ಈ ಆಕ್ಷೇಪ. ಇದು ಸಾಹಿತ್ಯ, ಇತಿಹಾಸ ಹಾಗೂ ಒಟ್ಟಾರೆ ಮಾನವ ಜೀವನ ವಿಕಾಸವೇ ಒಂದು ಪ್ರಕ್ರಿಯೆ ಎಂದೂ ತಿಳಿಯಲಾರದ ಜನಗಳ, ಪ್ರತಿಯೊಂದು ಕೃತಿಯೂ ಕಾಲ ನಿರಪೇಕ್ಷ, ಸ್ವಯಂಭೂ ಹಾಗೂ ಪರಿಪೂರ್ಣ (absolute) ಎಂದು ನಂಬಿರುವ ಸಂಪ್ರದಾಯಶೀಲರ, ಆಕ್ಷೇಪ. ಆದರೆ, ಜಿ. ರಾಜಶೇಖರ್ ಜನ್ನನ 'ಯಶೋಧರ ಚರಿತೆ' ಕುರಿತು ಮಾಡಿರುವ ವಿಮರ್ಶೆ ಗತಿತಾರ್ಕಿಕ ವಿಮರ್ಶೆಯಾಗಿದ್ದು, ಈ ಸಂಪ್ರದಾಯವಾದಿಗಳು ನಂಬಿದಂತೆ ಕೃತಿಗೆ ಅಪಚಾರ ಬಗೆಯುವುದಕ್ಕಿಂತ ಹೆಚ್ಚಾಗಿ ಅವರ ಐತಿಹಾಸಿಕ ಮಹತ್ವವನ್ನು' ಆಕೃತಿಯ ಅನನ್ಯತೆಯನ್ನು ಎತ್ತಿಹಿಡಿಯುವ ಬಗೆಯದಾಗಿದೆ. ನವ್ಯದ ಕೇವಲ 'ರೂಪಾರಾಧನ'ಗೆ ಭಿನ್ನವಾದ, ಸಾಹಿತ್ಯವನ್ನು ಒಂದು ಪ್ರಕ್ರಿಯೆಯಾಗಿ ತಿಳಿದು, ಸೂಕ್ಷ್ಮವೂ ದ್ವಂದ್ವಾತ್ಮಕವೂ ಆದ ಪರಿಕರಗಳಿಂದ ವಿಮರ್ಶಿಸುವ ಇಂಥ ವಿಮರ್ಶಾ ವಿಧಾನ ತನ್ನನ್ನು ತಾನು ಸಮರ್ಥಿಸಿಕೊಳ್ಳುವುದು ಇಂಥ ಬರೆಹಗಳಲ್ಲಿ.

**5.6.** ಈ ಪ್ರಶ್ನೆಗಳಿಗೆ ಉತ್ತರ ಕೆಲಮಟ್ಟಿಗೆ ಮೇಲೆಯೇ ಬಂದಿದೆ. ಸಾಹಿತ್ಯ ಚಳವಳಿ ಸೈದ್ಧಾಂತಿಕವಾಗಿ ಬೆಳೆಯಬೇಕಾದಷ್ಟು ಬೆಳೆಯಲಿಲ್ಲ. ಅದಕ್ಕೆ ಅದರ ನಾಯಕರ ಮಧ್ಯಮ ವರ್ಗೀಯ ಹಿತಾಸಕ್ತಿಗಳೇ ಕಾರಣ. ಗೋಕಾಕ್

ಚಳವಳದ ಸಂದರ್ಭದಲ್ಲಿ ಸಂಘಟನೆಯ ನಾಯಕರು ಎಸಗಿದ ಸೈದ್ಧಾಂತಿಕ ಪ್ರಮಾದ ಅದನ್ನು ಸಂಪೂರ್ಣವಾಗಿ ನೆಲ ಕಚ್ಚುವಂತೆ ಮಾಡಿತು. ನಂತರ ಕೂಡ ಅದು ಸಂಘಟನಾತ್ಮಕವಾಗಿ ಬೆಳೆಯಲಿಲ್ಲ. ಪ್ರಗತಿಪರ, ಎಡಪಂಥೀಯ ಒಲವುಗಳಿಗೆ ತನ್ನನ್ನು ತಾನು ತೆತ್ತುಕೊಂಡಿರುವುದಾಗಿ ಘೋಷಿಸಿಕೊಂಡ ಸಂಘಟನೆಯ ಸಮ್ಮೇಳವ ದಲ್ಲೇ ಕೈಗಾ ಅಣುಸ್ಥಾವರವನ್ನು ವಿರೋಧಿಸಿ ನಿರ್ಣಯ ಮಂಡಿಸಲಾಗು ತ್ತದೆ; ನಾಡಿನುದ್ದಗಲಕ್ಕೂ ಬರಗಾಲವಿದ್ದರೂ ಸರಕಾರ, ವಿಶ್ವಕನ್ನಡ ಸಮ್ಮೇಳನ ಜರುಗಿಸಿದಾಗ ಸಂಘಟನೆಯ ಸಂಚಾಲಕರೇ ವೇದಿಕೆಯಲ್ಲಿರುತ್ತಾರೆ; 1979ರಲ್ಲಿ ಧರ್ಮಸ್ಥಳದಲ್ಲಿ ಸಾಹಿತ್ಯ ಸಮ್ಮೇಳನ ಜರುಗಿದಾಗ ಅದಕ್ಕೆ ವಿರುದ್ಧವಾಗಿ ಬಂಡಾಯ ಸಾಹಿತ್ಯ ಸಂಘಟನೆ ರೂಪುಗೊಂಡು ಸಮಾನಾಂತರ ಸಮ್ಮೇಳನ ಜರುಗಿಸಿದಾಗ ಸಂಚಾಲಕರಾಗಿದ್ದವರಲ್ಲೊಬ್ಬರು ಕೆಲವೇ ವರ್ಷಗಳಲ್ಲಿ ಧರ್ಮಸ್ಥಳದಲ್ಲಿ ನಡೆವ ಹೆಗಡೆ ಯವರ ಖಾಸಗಿ ಗೋಷ್ಠಿಯಲ್ಲಿ 'ಸಾಹಿತ್ಯದಲ್ಲಿ ಬದ್ಧತೆ' ಕುರಿತು ಮಾತಾಡಲು ಹೋಗುತ್ತಾರೆ; ವಿದೇಶೀ ಸಂಸ್ಥೆಗಳ ಹಣ ಪಡೆಯುವ ಸ್ಥಳೀಯ ಸಂಸ್ಥೆಗಳೊಂದಿಗೆ ಬಂಡಾಯ ಲೇಖಕರು ನಿರ್ಲಜ್ಜವಾಗಿ ಗುರುತಿಸಿಕೊಳ್ಳುತ್ತಾರೆ. 'ಯಜಮಾನ ಸಂಸ್ಕೃತಿ'ಯನ್ನು ಪ್ರಚಾರ ಮಾಡುವ ಅದರ ಅಂಗಸಂಸ್ಥೆಗಳಾದ ಕ ಸಾ ಪ ಇತ್ಯಾ, ಅಕಾಡಮಿ, ಆಕಾಶವಾಣಿಗಳಲ್ಲಿ ಬಂಡಾಯ ಸಾಹಿತಿಗಳು ಭಾಗವಹಿಸಕೂಡದೆಂಬ ನಿರ್ಬಂಧವಿದ್ದಾಗಲೇ ಕೆಲವು ಬಂಡಾಯ ಸಾಹಿತಿಗಳು ಭಾಗವಹಿಸಿ ಕೃತಾರ್ಥರಾಗಿ, ಕಿರಿಯ ಸಾಹಿತಿಗಳು ಪ್ರಶ್ನಿಸಿದರೆ ಯಾರು ಎಲ್ಲೂ ಭಾಗವಹಿಸಬಹುದು ಎಂಬುದಾಗಿ ಅಪ್ಪಣೆ ಕೊಡಿಸುತ್ತಾರೆ. ಜಾತಿ ರಾಜಕೀಯ, ಗುಂಪುಗುಳಿತನ, ಪರಸ್ಪರ ಹಿತರಕ್ಷಣೆ (ವಿಮರ್ಶೆಯಲ್ಲಿ ಕೂಡ) ಮುಂತಾದ ವ್ಯಕ್ತಿವಾದಿ ಅನಿಷ್ಟಗಳು ಸಂಘಟನೆಯ ಘೋಷಿತ ಮೌಲ್ಯಗಳನ್ನು ವಿಡಂಬನೆಗೊಡ್ಡಿವೆ.

ಅಲ್ಲಿ ಇಲ್ಲಿ ಕೆಲವು ಕ್ರಿಯಾಶೀಲರು (ಉದಾ : ಬೆಟ್ಟದೂರು, ಆರ್.ವಿ.ಭಂಡಾರಿ ಉ.ಕ., ಧಾರವಾಡ ಮತ್ತು ದ.ಕ. ಜಿಲ್ಲೆಯ ಬಂಡಾಯ ಮಿತ್ರರು) ದಿಟ್ಟತನದಿಂದ ದುಡಿದಿರುವುದು ನಿಜವಾದರೂ ರಾಜ್ಯಮಟ್ಟದಲ್ಲಿ ಸಂಘಟನೆ ಕಾಗದದ ಹುಲಿಯಾಗಿ ಉಳಿದಿರುವುದು, ಅವರ ಪ್ರಯತ್ನ ನಿರೀಕ್ಷಿತ ಫಲ ನೀಡುವುದಾಗಲಿಲ್ಲ. ವರ್ಷ ಕ್ಕೊಮ್ಮೆ ಸಮ್ಮೇಳನ ನಡೆಸಿದ ಕೂಡಲೇ ಸಂಘಟನೆ ಜೀವಂತವಾಗಿದೆ ಎಂದು ಯಾರೂ ನಂಬಲಾರರಷ್ಟೇ ? ಈ ಸಮ್ಮೇಳನದಲ್ಲಿ ಮಂಡಿಸಲಾಗುವ ಪ್ರಬಂಧಗಳು, ಅಲ್ಲಿನ ವಿಚಾರಗಳು ಘೋಷಿತ ಎಡಪಂಥೀಯ ಒಲವುಗಳನ್ನು ಸಮರ್ಥಿಸುವ ಸ್ವರೂಪದ ವಾಗಿರುವುದಿಲ್ಲ ; ಹೊಸದಾಗಿ ಸಂಘಟನೆಯನ್ನು ಪ್ರವೇಶಿಸುವ ಮುಗ್ಧ-ಉತ್ಸಾಹಿ ಯುವಕರನ್ನು ದಾರಿ ತಪ್ಪಿಸುವಂಥವು. ಅವಕಾಶವಾದಿ ನಾಯಕರು ಅದೇ ಅದೇ ಪ್ಲೇಟನ್ನು ಕಳೆದ ಹತ್ತು ವರ್ಷಗಳಿಂದಲೂ ಅದೇ ಅದೇ ಪರಿಭಾಷೆಯೊಂದಿಗೇ

ಹಾಕುತ್ತಾ ಬಂದಿರುವವರು. ನಾಯಕರೆನಿಸಿಕೊಂಡವರ ಕೃತಿಗಳೇ ಕಳಪೆಯಾಗಿರು ವುದು ಇನ್ನೊಂದು ವಿಡಂಬನೆ. ಸಂಘಟನೆಯ ಹೊರಗಿರುವವರು ಹೆಚ್ಚು ಸೂಕ್ಷ್ಮತೆ ಯಿಂದ, ಒಳ್ಳೆಯ ಪ್ರಗತಿಪರ ಮೌಲ್ಯಗಳನ್ನು ಬಿಂಬಿಸುವ, ಕಲಾಕೃತಿಗಳನ್ನು ನೀಡು ತ್ತಿರುವಾಗ, ಸಂಘಟನೆಯೊಳಗಿನ ನಮಗೆ ಯಾಕೆ ಇನ್ನೂ ಇದು ಸಾಧ್ಯವಾಗಿಲ್ಲ? ಈ ಬಗ್ಗೆ ಇನ್ನೂ ನಾವು ಕೂತು ಚರ್ಚಿಸುವ ಜರೂರನ್ನು ಕಂಡುಕೊಂಡದ್ದಿಲ್ಲ. ನಮ್ಮದೇ ಆದ ಅಭಿವ್ಯಕ್ತಿ ವಿಧಾನ, ವಿಮರ್ಶಾ ವಿಧಾನ, ಪ್ರಾಯೋಗಿಕ ತೊಡಕುಗಳು, ಸಂಘಟನಾತ್ಮಕ ಸಮಸ್ಯೆಗಳನ್ನು ಕುರಿತು ಸಂವಾದ, ನಮ್ಮ ನಮ್ಮ ಇತಿಮಿತಿಗಳ ಕುರಿತು ಸ್ವವಿಮರ್ಶೆ ನಡೆಸಿಯೇ ಇಲ್ಲ. ಇದೆಂಥಾ ಪ್ರಗತಿಪರ ಸಂಘಟನೆ? ಇದೆಂಥಾ ಪ್ರಜಾಸತ್ತಾತ್ಮಕ ಚೌಕಟ್ಟು?

ಸಮ್ಮೇಳನ-ಜಾತ್ರೆಗಳಿಗಿಂತ ಶಿಬಿರಗಳು, ಕಾರ್ಯಾಗಾರಗಳು, ಅಧ್ಯಯನಾವಧಿ ಗಳು, ಪ್ರಕಟನಾಯೋಜನೆ, ಪುನರ್ ಮೌಲ್ಯೀಕರಣದ ಅಖಂಡ ಯೋಜನೆಗಳ ಮೂಲಕ ಸೈದ್ಧಾಂತಿಕ ಮತ್ತು ಸಾಂಸ್ಕೃತಿಕ ಎಚ್ಚರವನ್ನು ಮೂಡಿಸುವ ಅಗತ್ಯವನ್ನು ಕಾರ್ಯಕರ್ತರು ಎಷ್ಟೇ ಒತ್ತಿ ನುಡಿದರೂ ಕೇಂದ್ರಸಮಿತಿ ಈ ನಿಟ್ಟಿನಲ್ಲಿ ವಿಧಾಯಕವಾಗಿ ಯಾವ ಕೆಲಸವನ್ನೂ ಮಾಡಲಿಲ್ಲ. ಯಾವ ಪೂರ್ವರಂಗವನ್ನು ರಚಿಸಿಕೊಳ್ಳದೆ 'ಬಂಡಾಯ ಸಾಹಿತ್ಯ'ವೆಂಬ ಸಾಧಾರಣ ಬರಹಗಳ ದ್ವೈಮಾಸಿಕದ ಎರಡು ಮೂರು ಸಂಚಿಕೆಗಳನ್ನು ಪ್ರಕಟಿಸಿ ನಿಲ್ಲಿಸಿಬಿಟ್ಟಿತು. ಒಂದು ಕೃತಿ ಪ್ರಕಟವಾದ ಕೂಡಲೇ ಅದರ ವಿಮರ್ಶೆಯನ್ನು ಸಂಘಟನೆಯ ದೃಷ್ಟಿಯಿಂದ ಬರೆದು ಪ್ರಕಟಿಸುವ ಶಿಸ್ತು ಬದ್ಧ ಕಾರ್ಯಕ್ರಮ ಹಾಕಿಕೊಳ್ಳಲಿಲ್ಲ. (ಉದಾ.ಗೆ, ವ್ಯಾಸರಾಯ ಬಲ್ಲಾಳರ 'ಬಂಡಾಯ' ದಂಥ ಕಾದಂಬರಿಯನ್ನು ಬಂಡಾಯ ವಿಮರ್ಶಕರು ಹೇಗೆ ನೋಡುತ್ತಾರೆ, ಎಲ್ಲಿ ಇಡುತ್ತಾರೆ ಎಂಬ ಆಸಕ್ತಿ ಓದುಗರಲ್ಲಿದ್ದಾಗ, ಸಂಘಟನೆ ತನ್ನ ವಿಮರ್ಶಕರ ತಂಡ ದಿಂದ ವಿಮರ್ಶೆ ಬರೆಸಿ ಪ್ರಕಟಿಸಬೇಕಿತ್ತು. ಇದನ್ನು ಯಾಕೆ ಒತ್ತಿಹೇಳಬೇಕಾಗಿದೆ ಯೆಂದರೆ, ಇಂಥ ಶಿಸ್ತು, ಅನ್ಯಯನಪರತೆ ಇಲ್ಲದಿದ್ದಾಗ ಇಬ್ಬರು ಬಂಡಾಯ ಲೇಖಕರು ಸಂಪೂರ್ಣ ವಿರುದ್ಧವಾದ ಎರಡು ಅಭಿಪ್ರಾಯಗಳನ್ನು ನೀಡುವುದ ರಿಂದಾಗುವ ಗೊಂದಲವನ್ನು ತಪ್ಪಿಸಬಹುದು ಎಂಬುದು ಸಾಹಿತ್ಯಕೃತಿಯ ವಿಮರ್ಶೆ ಯಲ್ಲಿ ಏಕಾಭಿಪ್ರಾಯ ಅಸಾಧ್ಯವೆನಿಸಿದರೂ, ತಾತ್ವಿಕ ಗೊಂದಲ ಮತ್ತು ಬೌದ್ಧಿಕ ಅರಾಜಕತೆಯ ವಾತಾವರಣವನ್ನು ಕನಿಷ್ಠ ಸಂಘಟನೆಯೊಳಗಾದರೂ ನಿಯಂತ್ರಿಸು ವುದರ ಮೂಲಕ ಜನತೆಯ ಸಾಂಸ್ಕೃತಿಕ ಅಭಿರುಚಿಗಳನ್ನು ಪರಿಷ್ಕರಿಸುವ ಕಡೆಗೆ ಸಾಗ ಬಹುದಿತ್ತು ಎಂಬುದು.)

ಬಂಡಾಯ ಸಾಹಿತ್ಯ ಸಂಘಟನೆ ಕ್ರಮೇಣವಾದರೂ ಶಿಸ್ತಿನಿಂದ ನಡೆಕೊಳ್ಳಲಿ, ಅದರಿಂದ ಯುವಪೀಳಿಗೆಗೆ ಹೊಸ ಶಕ್ತಿ-ಚೈತನ್ಯ ದೊರಕುವಂತಾಗಲಿ ಎಂಬ ಸದಾಶಯ ದಿಂದ ಈ 'ಹಿನ್ನೋಟ' ನೀಡಿದ್ದೇನೆ. ಸಂಘಟನೆಗೆ ಹತ್ತು ವರ್ಷ ಪ್ರಾಯವಾದರೂ

ನಾವು ನಮ್ಮ ಇತಿಹಾಸದಿಂದ ಪಾಠ ಕಲಿಯುವುದಕ್ಕೆ ಸಿದ್ಧರಾಗಿಲ್ಲ. ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಒಬ್ಬ ಬಂಡಾಯ ಲೇಖಕರು, ಮುಸ್ಲಿಂ ಕತೆಗಾರರೊಬ್ಬರು ಬರೆದ ಕತೆಗಳಂತಹ ಒಂದು ಕತೆಯನ್ನು ಅನಂತಮೂರ್ತಿ ಬರೆಯಲಾರರು ಎಂದು ಅಪ್ಪಣೆ ಕೊಡಿಸಿದರು. ಸಂಘಟನೆ 'ಸೈದ್ಧಾಂತಿಕವಾಗಿ ಬೆಳೆದಿದೆ' ಎನ್ನುವಾಗ ಇಂಥ ಬೇಜವಾಬ್ದಾರಿಯ ಮಾತಿಗೆ ಆಸ್ಪದವಿರುತ್ತದೆಯೇ ? ಈ ಮಾತು ಯಾರ ಅರ್ಹತೆ, ಯಾರ ಅನರ್ಹತೆಯ ಕುರಿತಾದುದು ? ನಮಗೆ ಮುಸ್ಲಿಮರಲ್ಲಿಯೇ ಎಷ್ಟು ಸಾಹಿತಿಗಳ ಕೃತಿಗಳ ಅಧ್ಯಯನವಿದೆ? ಅವುಗಳ ತುಲನಾತ್ಮಕ ಅಧ್ಯಯನದಿಂದ ಹೊರಡಿಸಿದ ತೀರ್ಮಾನವೇ ಇದು ? ಅಥವಾ ನವ್ಯದ ಕುರಿತಾದ ಕೇವಲ ಆಗ್ರಹವೇ ? ಅಥವಾ ಚಪ್ಪಾಳೆ ಗಿಟ್ಟಿಸುವ ಹುಂಬ ತಂತ್ರವೇ ? ಅಧ್ಯಯನ, ಪ್ರಾಮಾಣಿಕ ಪರಿಶ್ರಮ, ಸಂವಾದಗಳಿಲ್ಲದೆ ನಮಗೆ ಯಾವುದೂ ಎಟುಕಲಾರದು : ಬದುಕೂ ಅಷ್ಟೆ, ಕಲೆಯೂ ಅಷ್ಟೆ. ಇದು ಬಂಡಾಯ ಸಂಘಟನೆಯೊಂದಿಗಿನ ನನ್ನ ಸಂಬಂಧದಲ್ಲಿ ಕಂಡುಕೊಂಡ ಸತ್ಯ.

# 'ಹತ್ತು ವರ್ಷಗಳ ಗಮನಾರ್ಹ ಕೃತಿಗಳೆಲ್ಲಾ ಬಂಡಾಯ ಚೌಕಟ್ಟಿನಿಂದ ಹೊರಗುಳಿದವುಗಳು'

**—ಜಿ. ರಾಜಶೇಖರ್**

**1.** 'ಖಡ್ಗವಾಗಲಿ ಕಾವ್ಯ : ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎನ್ನುವುದು ಬರಿಯ ಧ್ಯೇಯ ವಾಕ್ಯವಾಗಿಯೇ ಉಳಿದಿದೆ. ಈ ಹತ್ತು ವರ್ಷಗಳಲ್ಲಿ 'ಒಡಲಾಳ'ವನ್ನು ಬಿಟ್ಟರೆ ಬಂಡಾಯ ಸಾಹಿತ್ಯ ಯಾವ ಮಹತ್ವದ ಕೃತಿಯನ್ನು ಕೊಟ್ಟಿಲ್ಲ. 'ಒಡಲಾಳ' ಕೂಡ ಪೂರ್ಣವಾಗಿ ಬಂಡಾಯ ಕೃತಿಯೆ ? ಕನ್ನಡ ಕಥಾಪರಂಪರೆಯ ಜೊತೆಗೆ ಅದಕ್ಕೆ ಸಂಬಂಧವೇ ಇಲ್ಲವೆ ? ಎನ್ನುವುದು ಚರ್ಚಾರ್ಹ ವಿಷಯ. ಚಂದ್ರಶೇಖರ ಪಾಟೀಲರ ಕೆಲವು ಉತ್ತಮ ಕವಿತೆಗಳ ಬಗೆಗೂ ಈ ಮಾತನ್ನು ಹೇಳಬಹುದು. ನವೋದಯ ಮತ್ತು ನವ್ಯದ ಅತ್ಯುತ್ತಮ ಕೃತಿಗಳ ಜೊತೆ ಹೋಲಿಸಬಹುದಾದ ಕೃತಿಗಳೇ ಬಂಡಾಯ ಸಾಹಿತ್ಯದಲ್ಲಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ಹೊರಬಂದಿರುವ ಗಮನಾರ್ಹ ಕೃತಿಗಳು ಕೂಡಾ ಬಂಡಾಯದ ಚೌಕಟ್ಟಿನ ಹೊರಗೇ ಉಳಿಯುವಂತಹವು.

2. ಸಾಹಿತ್ಯದಲ್ಲಿ ಜನಪರ ಆಲೋಚನಾ ವಿಧಾನಕ್ಕೆ ಬಂಡಾಯ ಸಾಹಿತ್ಯ ಚಳುವಳಿಯ ಕೊಡುಗೆ ಅರ್ಥಪೂರ್ಣ ಎನ್ನುವ ಮಾತನ್ನು ಕೂಡ ನಾನು ಒಪ್ಪಿಕೊಳ್ಳುವುದಿಲ್ಲ. ಪ್ರಗತಿಶೀಲ ಚಿಂತನೆ ಇವತ್ತು ನಿನ್ನೆಯದ್ದಲ್ಲ ಎನ್ನುವುದನ್ನು ನಾವು ಮರೆಯಕೂಡದು. ಬಂಡಾಯ ಚಳುವಳಿ ಯಾವುದನ್ನೆಲ್ಲ ತನ್ನ ಕಾಳಜಿಗಳು ಎಂದು ಹೇಳಿಕೊಳ್ಳುತ್ತದೋ, ಅವೆಲ್ಲವೂ ನವೋದಯದ ಕಾಳಜಿಗಳೂ ಆಗಿದ್ದವು. 'ಆಧುನಿಕ ಕನ್ನಡದಲ್ಲಿ ನಡೆದಿರುವುದು ಒಂದೇ ಕ್ರಾಂತಿ-ಅದು ನವೋದಯುದ್ದಂ' ಎಂಬ ಮೊಕಾಶಿಯವರ ಮಾತಿಗೆ ನನ್ನ ಪೂರ್ಣ ಸಹಮತವಿದೆ.

ಇನ್ನು ಲೇಖಕರ ರಾಜಕೀಯದ ಬಗ್ಗೆ ಹೇಳುವುದಾದರೆ, ಆಧುನಿಕ ಕನ್ನಡ ಸಾಹಿತ್ಯದಲ್ಲಂತೂ ಪ್ರತಿಗಾಮಿಗಳು ಇಲ್ಲವೇ ಇಲ್ಲ. ಬಹುಶಃ ಭೈರಪ್ಪ ಒಬ್ಬರನ್ನು ಹಾಗೆಂದು ಕರೆಯಬಹುದೋ ಏನೋ. ಅವರಿಗಾದರೂ ಅದು ಪೂರ್ಣ ಅನ್ವಯ ವಾಗುತ್ತದೆಯೆ ಎಂಬುದರ ಬಗ್ಗೆ ನನಗೆ ಸಂದೇಹಗಳಿವೆ. ಇನ್ನು ಪ್ರತಿಗಾಮಿ ಚಿಂತನೆಯ ಅಂಶಗಳು ಉಳ್ಳ ಮಾಸ್ತಿ ಮತ್ತು ಅಡಿಗರಂತಹವರು ಈ ಲೇಬಲ್ಲುಗಳ ನ್ನೆಲ್ಲ ಮೀರಿ ನಿಲ್ಲುವ ಯೋಗ್ಯತೆಯ ಸಾಹಿತ್ಯವನ್ನು ಬರೆದಿದ್ದಾರೆ.

3. ಪ್ರಗತಿಶೀಲ ಮತ್ತು ಬಂಡಾಯ ಸಾಹಿತ್ಯಗಳ ನಡುವೆ ಸಾಮ್ಯವಿಲ್ಲ. ಮಹದೇವರ ಸಾಹಿತ್ಯ ಪ್ರಗತಿಶೀಲಕ್ಕಿಂತ ನವ್ಯಕ್ಕೇ ಹೆಚ್ಚು ಹತ್ತಿರ ವಾಗಿದೆ. ಹೆಚ್.ಎಸ್.ಶಿವಪ್ರಕಾಶರನ್ನು ಬಂಡಾಯ ಕವಿ ಎಂದು ಕರೆಯುವುದಾದರೆ ಅವರು ಕೂಡಾ ನವ್ಯಕ್ಕೇ ಹೆಚ್ಚು ಹತ್ತಿರವಾಗಿರುವವರು. ಚಂದ್ರಶೇಖರ ಪಾಟೀಲ, ಕುಂ.ವೀ, ಕಾಳೇಗೌಡ ನಾಗವರರಂತಹ ಲೇಖಕರ ಬಗೆಗೂ ಈ ಮಾತು ನಿಜ. ಆದರೆ ಕನ್ನಡದ ಪ್ರಗತಿಶೀಲ ಸಾಹಿತಿಗಳು ಕನ್ನಡ ಜನಜೀವನದ ಬಗ್ಗೆ ಬಂಡಾಯ ಸಾಹಿತಿಗಳಿಗಿಂತ ಹೆಚ್ಚು ಪ್ರೀತಿ ಮತ್ತು ಹೆಚ್ಚು ಒಡನಾಟ ಇಟ್ಟುಕೊಂಡಿದ್ದರು ಎಂದು ನನಗೆ ಅನ್ನಿಸುತ್ತಿದೆ. ಅ.ನ.ಕೃ, ನಿರಂಜನ, ಕಟ್ಟೀಮನಿ, ತ.ರಾ.ಸು ರಂತಹ ಲೇಖಕರ ಜೊತೆ ಹೋಲಿಸಿದರೆ ಬಂಡಾಯ ಸಾಹಿತಿಗಳ ಆಸಕ್ತಿಗಳು ತುಂಬ ಸೀಮಿತ.

4. ಬಂಡಾಯ ಸಾಹಿತ್ಯಕ್ಕೆ ಬೇರೆಯೇ ಆದ ವಿಮರ್ಶೆಯ ಮಾನ ದಂಡಗಳು ಇರಬೇಕು ಎನ್ನುವ ವಾದವನ್ನು ನಾನು ತಿರಸ್ಕರಿಸುತ್ತೇನೆ. ನೀವು ಹೇಳುತ್ತಿರುವುದು ಏನು ? ಬಂಡಾಯ ಸಾಹಿತ್ಯಕ್ಕೆ ಜಾಸ್ತಿ ಮಾರ್ಕು ಕೊಡಬೇಕು ಎಂದಲ್ಲವೆ ? ಅದರಿಂದ ಏನೂ ಪ್ರಯೋಜನವಿಲ್ಲ. ವಿಮರ್ಶಕರ ಮಾತು ಕೇಳಿ ಯಾರೂ ಪುಸ್ತಕ ಓದುವುದಿಲ್ಲ.

5) 'ಬಂಡಾಯ ಸಾಹಿತ್ಯ ಸೈದ್ಧಾಂತಿಕವಾಗಿ ಬೆಳೆದಷ್ಟು ಸಾಹಿತ್ಯಕವಾಗಿ ಬೆಳೆದಿಲ್ಲ' ಎಂದಿದ್ದೀರಿ. ಆದರೆ ಸೈಂದ್ಧಾಂತಿಕವಾಗಿಯಾದರೂ ಅದು ಬೆಳೆದಿದೆಯೆ? ನನಗೆ ನನ್ನದೇ ಆದ ಸಂದೇಹಗಳಿವೆ. ಬಂಡಾಯ ಚಳುವಳಿಯ ನಾಯಕರೇ ಗೋಕಾಕ್ ಚಳುವಳಿಯಲ್ಲಿ ಭಾಗವಹಿಸಿದ್ದನ್ನು ಕಂಡು ನನಗೆ ಅವರ ಪ್ರಗತಿಶೀಲತೆಯ ಬಗ್ಗೆಯೇ ಸಂಶಯ ಬಂದಿದೆ. ಗೋಕಾಕ್ ವರದಿ ಮತ್ತು ಗೋಕಾಕ್ ಚಳುವಳಿ — ಈ ಎರಡೂ ಕರ್ನಾಟಕದ ಅಲ್ಪ ಸಂಖ್ಯಾತರ ಬಗ್ಗೆ, ಮತ್ತು ಭಾಷೆಯ ಬಗ್ಗೆ ತಳೆದ ನಿಲುವು ಅತ್ಯಂತ ಪ್ರತಿಗಾಮಿಯಾದದ್ದು. ಕರ್ನಾಟಕದ ಅನೇಕ ಪ್ರಗತಿಶೀಲ ಚಿಂತಕರು ಮತ್ತು ಸಂಘಟನೆಗಳು ಈ ಚಳುವಳಿಯನ್ನು ಅದರ ಹುಟ್ಟಿನಿಂದಲೇ ವಿರೋಧಿಸಿದ್ದವು. ವಸ್ತುಸ್ಥಿತಿ ಹೀಗಿರುತ್ತ ಬಂಡಾಯ ಸಂಘಟನೆ ಈ ಚಳುವಳಿಯಲ್ಲಿ ಭಾಗವಹಿಸಿತು ಎಂದ ಮೇಲೆ ಅದರ ಸೈಂದ್ಧಾಂತಿಕ ನೆಲೆಗಳ ಬಗ್ಗೆ ಹೇಳುವುದೇನಿದೆ?

6) ಈ ಪ್ರಶ್ನೆಯನ್ನು ನಾನು ಈಗಾಗಲೇ ಉತ್ತರಿಸಿರುವೆ.

ಬಂಡಾಯ ಸಾಹಿತ್ಯ ಚಳವಳಿ **10** ವರ್ಷಗಳು : ಉದ್ಘಾಟನಾ **ಭಾಷಣ**

# 'ಬಂಡಾಯದ ಸಾಂಸ್ಕೃತಿಕ ಉದ್ದೇಶವೇ ಸಾಮಾಜಿಕ ಕ್ರಾಂತಿ'

ಚದುರಂಗ

ಬಂಡಾಯ ಸಾಹಿತ್ಯದ ಬಗ್ಗೆ ಆಲೋಚನೆ ಮಾಡುವಾಗ, ಮ್ಯಾಕ್ಸಿಂಗಾರ್ಕಿ (Maxim gorky) ಅಮೆರಿಕನ್ ಸಾಹಿತಿಗಳನ್ನುದ್ದೇಶಿಸಿ, ಆಡಿದ ಮಾತು ನೆನಪಾಗುತ್ತದೆ: Masters of American Culture, on which side are you—On the side of the exploited, or the exploiters? ಅಮೆರಿಕನ್ ಸಂಸ್ಕೃತಿಯ ಧೀಮಂತರೆ, ನಿಮ್ಮ ಒಲವು ಯಾರ ಪರ ಶೋಷಣೆಗೆ ಒಳಗಾದವರ ಪರವೊ, ಅಥವಾ ಶೋಷಣೆ ಮಾಡುವವರ ಪರವೊ?....

ಗಾರ್ಕಿಯ ಈ ಪ್ರಶ್ನೆಗೆ ಉತ್ತರವೊ ಎನ್ನುವಂತೆ ಬೇರೆಯೇ ಆದ ನಮ್ಮ ಇಂದಿನ ಸಾಹಿತ್ಯ ಸಂದರ್ಭದಲ್ಲಿ ಕನ್ನಡದ ಪ್ರಜ್ಞಾವಂತರ ಒಲವು ಎತ್ತ ಹರಿದಿದೆ ಎಂಬುದರ ದ್ಯೋತಕವಾಗಿ ಈ ಸಮ್ಮೇಳನ ರೂಪಿತವಾಗಿದೆ ಎಂದು ಭಾವಿಸುತ್ತೇನೆ

ದಿ. 8.10.89 ರಂದು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್‌ನಲ್ಲಿ ದಶ ವಾರ್ಷಿಕ ಬಂಡಾಯ ಸಾಹಿತ್ಯದ ನೆನಪಿಗೆ ವಿಚಾರ ಸಂಕಿರಣ, ಕವಿಗೋಷ್ಠಿ, ಚರ್ಚೆ ನಡೆಯಿತು. ಕನ್ನಡದ ಪ್ರಮುಖ ಸಾಹಿತಿ ಶ್ರೀ ಚದುರಂಗರು ಉದ್ಘಾಟನಾ ಭಾಷಣ ಮಾಡಿದರು. ಅವರ ಮಾತು ಗಳ ಪೂರ್ಣಪಾಠ ಇಲ್ಲಿದೆ. ಇದನ್ನು ಬಳಸಿಕೊಳ್ಳಲು ಒಪ್ಪಿಗೆ ಕೊಟ್ಟ ಚದುರಂಗರಿಗೆ ಕೃತಜ್ಞತೆಗಳು—

ಸಂಪಾದಕ.

ಬದುಕು ನಿಂತ ನೀರಾಗಬಾರದು. ಅದು ಸದಾ ಚಲಿಸುತ್ತಿರಬೇಕು. ಸಾಹಿತ್ಯ ವಾದರೂ ಅಷ್ಟೆ. ಇದು ಜೀವಂತಿಕೆಯ ಲಕ್ಷಣ. ಇಲ್ಲದಿದ್ದರೆ ಬದುಕಾಗಲಿ, ಸಾಹಿತ್ಯ ವಾಗಲಿ, ಕೊಳೆಯಲು ಆರಂಭಿಸುತ್ತದೆ. ಆಲೋಚನಾಶೀಲರೇ ಇಲ್ಲದ ಸಮಾಜ ಕೆಲವರ ಹಿಡಿತಕ್ಕೆ ಸಿಕ್ಕಿ ಅವರು ಹೇಳಿದ್ದೇ ಮಂತ್ರ, ಹಾಕಿದ್ದೇ ಮಾರ್ಗವಾಗಿ ಬದುಕು ಭಾವನೆ, ಮಾತುಗಳ ಅರ್ಥವನ್ನು ಕಳೆದುಕೊಳ್ಳುತ್ತದೆ. ಆಂದರೆ ಮಾತು, ಕೃತಿ ಬೇರೆ ಬೇರೆಯಾಗಿ, ಸಂಪ್ರದಾಯವು ಸಂಕೋಲೆಯಾಗಿ ಪರಿಣಮಿಸುತ್ತದೆ....ಇಂಥ ಸಂಪ್ರದಾಯದ ವಿರುದ್ಧ, ಎದ್ದ ಪ್ರತಿಭಟನೆಯೇ ಬಂಡಾಯ ಎನ್ನಿಸಿಕೊಳ್ಳುತ್ತದೆ.

ಜೀವನ ವಿಕಾಸ ಕ್ರಮದಲ್ಲಿ ಪ್ರತಿ ಹಂತದಲ್ಲೂ ನಡೆಯುವ ಈ ಬಂಡಾಯ ಅಪ್ಪನನ್ನು ಮಗ ಒಪ್ಪದಿದ್ದಾಗ ಮಗನನ್ನು ಅವನ ಮಗ ಒಪ್ಪದಿದ್ದಾಗ ಮಾತು ಕೃತಿ ಆಲೋಚನೆಯಲ್ಲಿ ಭಿನ್ನವಾಗಿ ಪ್ರತಿ ವ್ಯಕ್ತಿಯು ಮತ್ತೊಬ್ಬನಿಗೆ ಬಂಡಾಯವಾಗಿ ಪರಿಣಮಿಸುತ್ತಾನೆ.

ನಮ್ಮ ಜಾತಿ ಮತ ವರ್ಗಗಳ ಅನೀತಿ ವ್ಯವಸ್ಥೆಯಲ್ಲಿ ಮನುಷ್ಯ ಕಳೆದು ಹೋಗಿ ರುವುದನ್ನು ಹುಡುಕಿ ಉಳಿಸಲು ಎಚ್ಚೆತ್ತ ಮನಸ್ಸುಗಳು ಸದಾ ತುಡಿಯುತ್ತಿರುತ್ತವೆ ಕ್ರಿಯಾಶೀಲವಾಗಿರುತ್ತವೆ; ಹೋರಾಟದ ದಿಕ್ಕು ದೆಸೆಯನ್ನು ಮೊನಚುಗೊಳಿಸು ತ್ತಿರುತ್ತವೆ....ಹೀಗೆ ಪ್ರತಿಕ್ರಿಯೆಯಾಗಿ ಹುಟ್ಟಿಕೊಂಡ ಬಂಡಾಯ ಸಾಹಿತ್ಯದ ಸಾಂಸ್ಕೃತಿಕ ಉದ್ದೇಶವೇ ಸಾಮಾಜಿಕ ಕ್ರಾಂತಿ.

ಸಾವಿರಾರು ವರ್ಷಗಳಿಂದಲೂ, ನಮ್ಮ ಸಾಹಿತ್ಯಲೋಕದಲ್ಲಿ ಇಂಥ ಬಂಡಾಯ. ನಿರಂತರವಾಗಿ ಆಗುತ್ತಿರುವುದನ್ನು ನಾವು ಗಮನಿಸಬಹುದು. ಪಂಪ ಬಸವ ಹರಿಹರ ಕನಕ ಮೊದಲಾದವರು ಹಳೆಯ ಪದ್ಧತಿಯಿಂದ ಹೊಸ ರೀತಿಗೆ ಗಟ್ಟಿಯಾಗಿ ತೊಡಗುವ ಕ್ರಮವೆ ವಿಕ್ರಮವಾಗಿ ಆಯಾಯ ಕಾಲಕ್ಕೆ ಬಂಡಾಯವೆನಿಸುತ್ತವೆ. ಇವರೆಲ್ಲ ನಮ್ಮ ಸಾಂಸ್ಕೃತಿಕ ಸಾಹಿತ್ಯ ಸೀಮೆಯನ್ನು ವಿಸ್ತರಿಸಿದವರು.

ರಾಮಾಯಣ ಮಹಾಭಾರತಗಳು ನಮ್ಮ ಪರಂಪರೆಯು ಒಪ್ಪಿಕೊಂಡಿರುವ ಭಾರತದ ಸಾಂಸ್ಕೃತಿಕ ಕಾವ್ಯಗಳು. ಇವುಗಳ ಸರಿ ತಪ್ಪುಗಳನ್ನು ಪ್ರಶ್ನಿಸಿದರೆ ಅಪಚಾರ ವೆನಿಸುವುದು ಅಂದಿಗೆ ಮಾತ್ರವಲ್ಲ. ಇಂದಿಗೂ ಸಹ ಎಂದರೆ, ನಮ್ಮ ಸಂಪ್ರದಾಯ ಗಳು ಹೇಗೆ ಜಡ್ಡುಗಟ್ಟಿವೆ ಎನ್ನುವುದು ತಿಳಿಯುತ್ತದೆ.

ವ್ಯಾಸ ಭಾರತದ ಕೃಷ್ಣ–ದೈವ! ಅವನ ಆಶೀರ್ವಾದವಿಲ್ಲದೆ, ಏನೂ ಯಾರೂ ಒಂದು ತೃಣವೂ ಅಲುಗಾಡುವಂತಿಲ್ಲ ! ಅಲ್ಲಿ ನಡೆಯುವುದೆಲ್ಲ ಬಹುತೇಕ ಪವಾಡ ಈ ಕಲ್ಪನೆಗೆ ಭಿನ್ನವಾಗಿ ಕಥೆ, ಪಾತ್ರಗಳನ್ನು ಲೌಕಿಕ ನೆಲೆಯಲ್ಲಿ ದುಡಿಸಿಕೊಂಡು ಮಾನವೀಯತೆಯನ್ನು ಮೆರೆಯುತ್ತಾನೆ-ಪಂಪ !

ಚಂಪೂ ಯುಗದ ಪಂಪನಿಂದ ವಚನ ಯುಗಕ್ಕೆ ಬಂದರೆ ಬಸವ ಬಂಡಾಯವನ್ನು ಕಾಣುತ್ತೇವೆ. ಧರ್ಮ ಸಮಾಜ ಭಾಷೆ ಭಾವನೆಗಳ ತಳ ಸೋಸುವಿಕೆ ಎಲ್ಲ ಜಾತಿ ಮತ ವರ್ಗದವರಿಂದ ನಡೆದದ್ದು ಬಸವಣ್ಣ ಸಾಧಿಸಿದ ಬಹು ಮಹತ್ವದ ಆಂದೋಲನ....ಆದರೆ ಈ ಬಂಡಾಯ, ಕಾಲದ ಕಣದಲ್ಲಿ ಗಟ್ಟಿ ಕಾಳಾಗದೆ ಜಳ್ಳಾಗಿ ಹೋದದ್ದೊಂದು ದೊಡ್ಡ ವಿಪರ್ಯಾಸ !

ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಮುಂತಾದ ಶಿವಶರಣರು, ಶಿವಭಕ್ತರಾಗಿ, ಲಿಂಗ ತೊಟ್ಟು, ಕಾಯಕದಲ್ಲಿ ಇದ್ದು, ಶಿವೈಕ್ಯರಾಗು ತ್ತಾರೆಯೇ ಹೊರತು, ತಮ್ಮ ತಮ್ಮ ಒಳ ಕೆಳ ಜಾತಿಗಳಲ್ಲಿ ನಶಿಸುತ್ತಿದ್ದ ವ್ಯಕ್ತಿತ್ವ ಸಮುದಾಯಗಳನ್ನು ಉಳಿಸಿ ಬೆಳೆಸುವ ಭರವಸೆಗಳಾಗುವುದಿಲ್ಲ. ಈ ದುರಂತ, ಹರಿಹರ ಕನಕರ ಕಾಲಕ್ಕೂ ಸಾಂಕ್ರಾಮಿಕವಾಗುತ್ತದೆ.

ಇನ್ನು 20ನೇ ಶತಮಾನಕ್ಕೆ ಬಂದರೆ ಈ ಬಂಡಾಯ-ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯವಾಗಿ ಪ್ರಕಟವಾಗುವುದನ್ನು ಕಾಣುತ್ತೇವೆ.

ಬಂಡಾಯಕ್ಕೆ ಮೂಲ ಪ್ರೇರಣೆ, ಮಹಾರಾಷ್ಟ್ರದಲ್ಲಿನ ದಲಿತ ಪ್ಯಾಂಥರ್ಸ್. ಅವರಿಗೆ ಪ್ರೇರಣೆ ಬಂದದ್ದು ಕಪ್ಪು ಜನಾಂಗದ ಒಕ್ಕೊರಲಿನ ಕೂಗು ಕಿಚ್ಚು ರೊಚ್ಚಿನ, ಕೆಂಗಣ್ಣಿನ ನೋಟದ ಬ್ಲ್ಯಾಕ್ ಪ್ಯಾಂಥರ್ಸ್ [Black Panthers] ಮೂಲಕ-ಎಂದಾಗ, ನಮ್ಮವರ "ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣಮಿತ್ರ" ಎನ್ನುವ ಬಂಡಾಯದ ವಾಸ್ತವಿಕತೆಯನ್ನು, ಸಾಕ್ಷೀಕರಿಸಿದ ಮಿಂಚಿನ ನುಡಿ, ಸಾಹಿತ್ಯ ರಚನೆಗೆ ರಾಜಕೀಯ ಚಿಂತನೆಯ ಬೆನ್ನುಹುರಿ ಜೋಡಿಸುವ ಮಹತ್ವಾಕಾಂಕ್ಷೆ ಹೊತ್ತ ಚಳವಳಿಯಾಗಿ, ಈ ಹತ್ತು ವರ್ಷಗಳಲ್ಲಿ ನಾವು ಬಯಸಿದಷ್ಟು, ನಿರೀಕ್ಷಿಸಿದಷ್ಟು, ದಷ್ಟ ಪುಷ್ಟವಾಗಿ, ಬೆಳೆಯದಿದ್ದರೂ ಇಲ್ಲಿಯತನಕ ಇಟ್ಟಿರುವ ಹೆಜ್ಜೆಗಳು ಗಮನಾರ್ಹವಾಗಿದ್ದು, ಮುಂದೆ ಬರಲಿರುವ, ಸಾಧನೆಯ, ವಿಕ್ರಮದ ಕಣ್ಸನ್ನೆ ಯಂತಿವೆ....ಕೆಳ ಸ್ತರದ ಜಾತಿ ಮತ ವರ್ಗಗಳಿಂದ ಬಂದಂಥ ನಮ್ಮ ದಲಿತ ಬಂಡಾಯ ಸಾಹಿತಿಗಳು ಕೆಲವರು ವೈಯಕ್ತಿಕವಾಗಿ ಕನ್ನಡ ಸಾಹಿತ್ಯವು ದಿಟಕ್ಕೂ ಹೆಮ್ಮೆ ಪಡು ವಂಥ ಮೇಲ್ಮಟ್ಟದ ಪ್ರತಿಭಾಪೂರ್ಣ ಕತೆ ಕಾವ್ಯ ಕಾದಂಬರಿಗಳನ್ನು ನೀಡಿರುವುದು ಸುಳ್ಳಲ್ಲ. ವಾಸ್ತವದ ನಿಜದಲ್ಲಿ ಮಣ್ಣೇ ಸ್ಫೋಟಗೊಂಡಂತೆ ಆಡುಮಾತಿನ ಶಕ್ತ ಭಾಷೆ ಯನ್ನು ಬಳಸಿ, ನವ್ಯರ ಆತ್ಮರತಿಯಲ್ಲಿ ಮುಳುಗಿದ್ದ ಸಾಹಿತ್ಯವನ್ನು ಹೊಸ ಎತ್ತರ

ಚಿತ್ರರಗಳಿಗೆ ಕೊಂಡೊಯ್ದುದೂ ಸುಳ್ಳಲ್ಲ. ವೈಭವೀಕರಣದಿಂದ ದೂರ ನಿಂತು ಒಳ ನೋಟ ತಾತ್ವಿಕ ನೆಲೆಗಳಿಂದ ಮಾನವೀಯತೆಯ ಸೊಬಗತೆಯನ್ನು ನಮ್ಮ ಸಾಹಿತ್ಯಕ್ಕೆ ನೀಡಿವುದೂ ಸುಳ್ಳಲ್ಲ.... ಆದರೆ ಒಟ್ಟಾರೆಯಾಗಿ ಒಂದು ಬಲಿಷ್ಠ ಸಾರ್ವತ್ರಿಕ ಚಳವಳಿಯಾಗಿ ಬಂಡಾಯ ಸಾಹಿತ್ಯ ಇನ್ನೂ ಸಾಕಷ್ಟು ಹರಳುಗಟ್ಟಬೇಕಾಗಿದೆ ಎಂಬುದೂ ಅಷ್ಟೇ ಸತ್ಯ!....

ಇವಕ್ಕೆ ಸ್ವವಿಮರ್ಶೆ ಬೆಳೆಯದಿರುವುದು ಕಾರಣವಾಗಿರಬಹುದೆ?....ಅಥವಾ ದಲಿತರು ಹಾಗೂ ದಲಿತೇತರ ಶೋಷಿತರು ಲಿಂಗ ತೊಟ್ಟು ತಮ್ಮ ವೃತ್ತಿ ಬಾಂಧವ ರನ್ನು ಮರೆತ ಶಿವಶರಣರಂತೆ, ಶಿಕ್ಷಣ ಉದ್ಯೋಗ ಇವರಿಗೆ ದೊರೆತ ಕೂಡಲೆ ಮಡಿ ವಂತಿಕೆಯಿಂದ ತಮ್ಮ ಅಶಿಕ್ಷಿತ ಅನಕ್ಷರಸ್ಥ ಜನ ಸಮುದಾಯದಿಂದ ದೂರವಾಗಿ. ತಾವೇ ಪ್ರತ್ಯೇಕ ವರ್ಗವಾಗಿ ದ್ವೀಪವಾಗಿ ಉಳಿದಿರುವುದೂ ಬಹಳಷ್ಟು ಕಾರಣವಿರ ಬಹುದೆ?-ಯೋಚಿಸಬೇಕು!

ಈಗ ಕೆಳ ಸ್ತರಗಳಿಂದ ಬಂದ ಕೆಲವು ಮಹಿಳೆಯರು ದಿಟ್ಟವಾಗಿ ಸಾಹಿತ್ಯ ರಚನೆ ಮಾಡುತ್ತಿರುವರಾದರೂ, ಹೆಣ್ಣಿನ ಬಗೆಗೆ ಗಂಡಸಿನ ದೃಷ್ಟಿ ಬದಲಾದಂತೆ ಕಾಣುತ್ತಿ ದೆಯೆ?-ಅನುಮಾನ !

ಇದಕ್ಕೊಂದು ನಿದರ್ಶನ ಕೊಡುತ್ತೇನೆ. ಕೆಲವು ವರ್ಷಗಳ ಹಿಂದೆ ಪುಣೆಯ ಫಿಲ್ಮ್ ಇನ್‌ಸ್ಟಿಟ್ಯೂಟಿನಲ್ಲಿ ನಾನೊಂದು ವಿಚಾರ ಸಂಕಿರಣದಲ್ಲಿ ಭಾಗವಹಿಸಿದ್ದೆ. ಆಗ ಮಹಾರಾಷ್ಟ್ರದ ಖ್ಯಾತ ದಲಿತ ಲೇಖಕ ದಯಾ ಪವಾರ್ ಅವರ ಆತ್ಮಚರಿತ್ರೆಯ ಚಲನಚಿತ್ರವೊಂದನ್ನು, ವೀಕ್ಷಿಸುವ, ಅವಕಾಶ ನನಗೆ ಸಿಕ್ಕಿತ್ತು. ಅವರ ಆತ್ಮಚರಿತ್ರೆ ಯನ್ನು ಓದಿಲ್ಲದಿದ್ದರೂ, ಬಹಳಷ್ಟು ಕೇಳಿದ್ದುದರಿಂದ ಅವರ ಬಗ್ಗೆ ನನ್ನಲ್ಲಿ ಅಪರಿಮಿತ ಪ್ರೀತಿ ಗೌರವಗಳು ಬೆಳೆದಿದ್ದವು. ಆದರೆ, ಚಲನಚಿತ್ರದಲ್ಲಿ, ಅವರನ್ನು ಚಿತ್ರಿಸಿದ್ದ ರೀತಿ ನನಗೆ ಬೇಸರ ತಂದಿತ್ತು.

ತೀರ ಕೆಳ ಸ್ತರದಲ್ಲಿ ಹುಟ್ಟಿದ ದಯಾ ಪವಾರ್, ಹೇಗೋ ವಿದ್ಯೆ ಕಲಿತು ಸರ್ಕಾರದ ಸಣ್ಣ ಇಲಾಖೆಯೊಂದರಲ್ಲಿ ನೇಮಕಗೊಂಡಿದ್ದ ಕಾಲ. ಚಿಕ್ಕ ಪ್ರಾಯದ ಚೆಲುವೆ ಹೆಂಡತಿಯೊಡನೆ ಮುಂಬಯಿಯ ಕೊಳೆಗೇರಿಯೊಂದರಲ್ಲಿ ವಾಸ. ಒಂದು ಮಗುವೂ ಆಗಿತ್ತು. ಆತ ಹೊತ್ತಿಗೆ ಮುಂಚೆ ಕಚೇರಿಗೆ ಹೋದರೆ ಮತ್ತೆ ತನ್ನ ಜೋಪಡಿಗೆ ಮರಳುವುದು ಹೊತ್ತು ಮುಳುಗಿದ ವೇಳೆಯೇ !

ಸ್ವಲ್ಪ ಮಟ್ಟಿಗೆ ವಿದ್ಯೆ ಕಲಿತ ಆತನ ಮಡದಿಗೆ ದೀರ್ಘ ಸಮಯದ ಈ ಒಂಟಿ ಬಾಳು ದುಸ್ಸಹನೀಯವಾಗಿತ್ತು.

ಈ ಪರಿಸ್ಥಿತಿಯಲ್ಲಿ ಮಗುವಿನ ಮೂಲಕ ಸಮಿಪದಲ್ಲಿ ಸೈಕಲ್ ರಿಪೇರಿ ಮಾಡುವ ಮುಸ್ಲಿಂ ಯುವಕನ ಪರಿಚಯವಾಗಿ ಅವನೊಡನೆ ಸಲಿಗೆ ಬೆಳೆಯಿತು. ದಯಾ

# ದಲಿತ-ಬಂಡಾಯ ಸಾಹಿತ್ಯ ಕ್ರಿಯಾಶೀಲವಾಗಿದೆ

—ಕೆ.ಎಸ್. ಭಗವಾನ್

1. ಮಳೆ ಬಿದ್ದಾಗ ನೀರು ತುಂಬಿ ಹರಿಯುವಾಗ ಕಸ ಕಡ್ಡಿ ಸೇರಿ ಬಗ್ಗಡವಾಗುತ್ತದೆ. ಅದು ಹಳ್ಳದಲ್ಲಿ ನಿಂತು ತಿಳಿಯಾಗಬೇಕಾದರೆ ಸ್ವಲ್ಪ ಸಮಯ ತೆಗೆದುಕೊಳ್ಳುತ್ತದೆ. ಆಮೇಲೆ ಕಾಲಾನಂತರ ಇಂಗಿಹೋಗುತ್ತದೆ. ನೀರು ಅಗತ್ಯವಾದಾಗ ಹಳ್ಳವಸಿ ಜಮೀನಿನಲ್ಲಿ ಗುಂಡಿಯನ್ನೊ ಭಾವಿಯನ್ನೊ ತೋಡಿದರೆ ಒಳ್ಳೆಯ ನೀರು ಸಿಗುತ್ತದೆ. ಹಾಗೆಯೆ ಚಳುವಳಿಗಳೂ ಎನ್ನಬಹುದು. ಚಳುವಳಿಯ ವಿಚಾರಗಳು ಆಸಕ್ತರ ಮನಸ್ಸಿನಲ್ಲಿ ನೆಲೆಯೂರಿ ಅರಳಿದಾಗ ಕಲಾಭಿವ್ಯಕ್ತಿಯಾಗುತ್ತದೆ; ಅಲ್ಲಿಂದ ಮೂಡಿದಾಗ ಉತ್ತಮ ಸಾಹಿತ್ಯ ಕೃತಿಗಳು ಸೃಷ್ಟಿಯಾಗುತ್ತವೆ.

ಕಲಾತ್ಮಕತೆ ಎಂದರೇನು ? ಸೂಕ್ತ ಉತ್ತರ ಕಾಣುವುದಿಲ್ಲ. ಆದರೂ ಭಾವನೆಗಳನ್ನು ತೀವ್ರತಮವಾಗಿ ಹೇಳುತ್ತ ವಾಚಕರಿಗೆ ಅನುಭವದ ಸಂಭಾವ್ಯತೆಯನ್ನು ಉಂಟುಮಾಡುವುದೇ ಕಲಾತ್ಮಕತೆ ಎಂದು ಹೇಳಬಹುದೆಂದು ತೋರುತ್ತದೆ.

ಬಂಡಾಯ ಸಾಹಿತ್ಯದಲ್ಲಿ ಕಲಾತ್ಮಕತೆ ಇದೆಯೆ ? ಎಂದು ಕೇಳುವುದು ಉದ್ದೇಶಪೂರ್ವಕವಾಗಿ ಬಂಡಾಯ ಸಾಹಿತ್ಯದ ಗುಣಗಳನ್ನು ಮರೆಮಾಚುವುದೂ ಹಾಗೂ ಅದು ಪಡೆಯುವ ಪ್ರಾಮುಖ್ಯತೆಯಿಂದ ಅದನ್ನು ಗೌಣವಾಗಿಸುವುದೂ ಆಗಿದೆ. ಬಂಡಾಯ ಸಾಹಿತ್ಯದಲ್ಲಿ ಹಿಂಸೆ, ನೋವು, ಅಬ್ಬರ ಜಾಸ್ತಿ ಬರ್ತಾ ಇದೆ, ಇದು ಕಲಾತ್ಮವಲ್ಲ ಎಂಬ ಕೂಗು ಎದ್ದಿದೆ. ಕೊಲೆ ಹಿಂಸೆ ರಕ್ತಪಾತ ರಾಮಾಯಣ ಮಹಾಭಾರತಗಳಲ್ಲಿ ಇಲ್ಲವೆ? ಇರುವುದೇನು ಕಡಿಮೆಯೆ ? ಅಲ್ಲಿ ಅವು ಕಲಾತ್ಮಕವಾಗಿ ಕಂಡುಬಂದರೆ ಇಲ್ಲೇಕೆ ಕಲಾತ್ಮವಾಗಬಾರದು ? ಆದರೆ ಗುಟ್ಟು ಇದು; ರಾಮಾಯಣ ಮಹಾಭಾರತಗಳಲ್ಲಿ ಮೇಲುವರ್ಗದವರು ಕೆಳವರ್ಗದವರನ್ನು ಹಿಂಸಿಸುವುದರಿಂದ ಕೊಲ್ಲುವುದು (ಶಂಬೂಕವಧೆ, ಏಕಲವ್ಯ ಪ್ರಸಂಗ ಇತ್ಯಾದಿ) ಕಲಾತ್ಮಕವಾಗಿ ಕಾಣಿಸುತ್ತದೆಯಲ್ಲವೆ ? ಆದರೆ ಬಂಡಾಯ ಸಾಹಿತ್ಯದಲ್ಲಿ ವ್ಯವಸ್ಥೆಯ ವಿರುದ್ಧ ಹೋರಾಟವಿರುವುದರಿಂದ, ಅದನ್ನು ಬದಲಾಯಿಸಲು ಬರವಣಿಗೆ ತೀವ್ರವಾಗಿ ತೊಡಗಿರುವುದರಿಂದ ಅದು ಕಲಾತ್ಮಕವಾಗಿಲ್ಲ ! ಉಳ್ಳವರಿಗೆ ಇಲ್ಲದವರು ಬಲಿಯಾದರೆ ಅದು ಕಲೆ ; ಇದು ಸರಿಯಲ್ಲ ಎಂದು ಮನುಷ್ಯತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದರೆ ಅದು ಕಲೆಯಲ್ಲ ! ಸಾಹಿತ್ಯ-ವಿಮರ್ಶೆಗಳ ಹಿಂದೆ ಅಡಗಿಕೊಂಡು ಪಟ್ಟಭದ್ರ ಹಿತಾಸಕ್ತಿಗಳು ಕಲೆಯ ಹೆಸರಿನಲ್ಲಿ ಕೊಲೆ ಮಾಡುತ್ತಿವೆ.

ಬಂಡಾಯ ಸಾಹಿತ್ಯದಲ್ಲಿ ಕಲಾತ್ಮಕ ಎನ್ನಬಹುದಾದಂಥ ಬರವಣಿಗೆ ಸಾಕಷ್ಟು ಬಂದಿದೆ ; ವಿಶೇಷವಾಗಿ ಕಥೆ ಮತ್ತು ಕವಿತೆ ಪ್ರಕಾರಗಳಲ್ಲಿ. ಬಂಡಾಯ ಸಾಹಿತ್ಯ ಚಳುವಳಿಯಿಂದ ನಮ್ಮ ಜನರು, ಬಹುಮಟ್ಟಿಗೆ ಸಾಹಿತಿಗಳ ಆಲೋಚನಾ ವಿಧಾನ ಜನಪರವಾಗಿದೆ. ಅದರ ಪ್ರಭಾವವನ್ನು ಅವರ ಬರವಣಿಗೆಯಲ್ಲಿ ಗುರುತಿಸಬಹುದು.

2. ನವೋದಯ ಚಳುವಳಿಯಲ್ಲಿ ಬಹುಪಾಲು ಆತ್ಮನಿಷ್ಠ ಮತ್ತು ವಸ್ತುನಿಷ್ಠ ದೃಷ್ಟಿಗಳೆರಡನ್ನೂ ಅನೇಕ ಕೃತಿಗಳ ವಿಶ್ಲೇಷಣೆಯಿಂದ ತೋರಿಸಬಹುದು. ಅವರಿಗೆ ಸ್ವಾತಂತ್ರ್ಯ ಚಳುವಳಿ, ಗಾಂಧಿ ಚಳುವಳಿಗಳ ನೇರ ಪ್ರಭಾವ ಇದ್ದುದರಿಂದ ವ್ಯಕ್ತಿಯನ್ನು ತನ್ಮೂಲಕ ಸಮಾಜವನ್ನು ತಿದ್ದುವ ದೃಷ್ಟಿಯಿತ್ತು. ಹಾಗಾಗಿ ಅವರಲ್ಲಿ ವಸ್ತುನಿಷ್ಠೆ ಮತ್ತು ಆತ್ಮನಿಷ್ಠೆಗಳನ್ನು ಸಮತೋಲನವಾಗಿ ಕಾಣಬಹುದು. ಇದೇ ಶ್ರೇಷ್ಠ ಸಾಹಿತ್ಯದ ರಹಸ್ಯವೂ ಆಗಿದೆ.

ನವ್ಯ ಸಾಹಿತ್ಯದಲ್ಲಿ ಇದು ಆತ್ಮನಿಷ್ಠೆಗೆ ಮಾತ್ರ ಹೆಚ್ಚಾಗಿ ಸೀಮಿತವಾಯಿತೆಂದು ಹೇಳಬಹುದು. ಇದರಲ್ಲಿ ಅಭಿವ್ಯಕ್ತಿಗೊಂಡ ಭಾವನೆಗಳು ಬಹುವಾಗಿ ಮನುಷ್ಯನನ್ನು ಹೀಗಳೆಯುವ, ಅವನನ್ನು ಕೆಳಕ್ಕೆ ಎಳೆಯುವಂಥವುಗಳೇ ಆಗಿವೆ ಎನಿಸುತ್ತದೆ. ಮನುಷ್ಯನನ್ನು ಮೇಲಕ್ಕೆತ್ತುವ ಅವನ ಬದುಕಿಗೆ ಹೊಸ ಕಾಂತಿ ಹುರುಪು ತುಂಬುವ ಭಾವನೆಗಳಾಗಲೀ ವಿಚಾರಗಳಾಗಲೀ ಕಾಣಿಸುವುದಿಲ್ಲ. ಈ ಸಾಹಿತ್ಯದನ್ನು ಓದುವುದರಿಂದ ಓದುಗರಿಗೆ ಧ್ಯೇಯ ಧೋರಣೆಗಳು ದೃಢವಾಗುವುದಕ್ಕೆ ಬದಲಾಗಿ ಅವನು ಯಾವ ವಿಷಯಗಳನ್ನು ದೂರೀಕರಿಸಬೇಕೋ ಅವುಗಳ ಕಡೆಗೇ ಜೋತುಬೀಳುವಂತಾಗುತ್ತದೆ. ಅದರಲ್ಲಿ ಆತ್ಮದ ಉನ್ನತಿಗಿಂತ ಆತ್ಮದ ಅವನತಿಯೇ ಹೆಚ್ಚಾಗಿ ಕಾಣುತ್ತದೆ.

ಇಂಥ ಆತ್ಮರತಿಯಿಂದ ಮನುಷ್ಯನನ್ನು ಬಿಡಿಸಿ ಅವನು ಕಾರ್ಯೋನ್ಮುಖನಾಗುವಂತೆ ಮಾಡಿತು ಬಂಡಾಯ ಸಾಹಿತ್ಯ; ಹಾಗೂ ಬಂಡಾಯ ಸಾಹಿತ್ಯದ ಒಳಸುಳಿಯಾದ ದಲಿತ ಸಾಹಿತ್ಯ.

ಹೆಬ್ಬೆಟ್ಟಿನ ಜನಾಂಗದಿಂದ ಇದುವರೆಗೆ ಸಾಹಿತ್ಯ ರಚನೆ ಆಗದಿದ್ದುದರಿಂದ ಹಾಗೂ ಇನ್ನಿತರ ಕಾರಣಗಳಿಂದ ನಮ್ಮ ಚರಿತ್ರೆಯು ಮುಕ್ಕಾಲಿಗಿಂತಲೂ ಹೆಚ್ಚು ಭಾಗ ಊನವಾಗಿತ್ತು. ಅದನ್ನು ಸರಿಪಡಿಸುವ ರೀತಿಯಲ್ಲಿ ಈಗ ಬಂಡಾಯ-ದಲಿತ ಸಾಹಿತ್ಯ ಕ್ರಿಯಾಶೀಲವಾಗಿದೆ. ತತ್ಪರಿಣಾಮವಾಗಿ ಈಗ ಸಾಹಿತ್ಯ ಕೃಷಿ ಬಹುಮುಖವಾಗಿ ನಡೆಯುತ್ತಿದೆ. ತನ್ನ ಉಳಿವಿಗಾಗಿ ಮನುಷ್ಯ ಹೊರ ಜಗತ್ತಿನೊಡನೆ ಕಾದಾಡುತ್ತಾನೆ. ಆ ಹೋರಾಟ ನಿಂತಮೇಲೆ ಅವನು ತನ್ನೊಳಗಿನ ಜಗತ್ತಿನ ಜೊತೆ ಸಂಗ್ರಾಮ ಶುರುಮಾಡುತ್ತಾನೆ. ಹೊರಜಗತ್ತನ್ನು ಮರೆತ ಸಾಹಿತ್ಯ "ಕೈ ಕಾಲು ಸಣ್ಣ ಹೊಟ್ಟೆ ಡುಬ್ಬಣ್ಣ" ಎಂಬಂತಾಗುತ್ತದೆ. ಹೊರನೋಟ ನೆಟ್ಟ ಬಂಡಾಯ ಸಾಹಿತ್ಯ ಒಳನೋಟ ರಹಿತವಾಗಬಾರದು, ಆಗುವುದಿಲ್ಲ ಎಂಬುದಕ್ಕೆ ನಿದರ್ಶನಗಳು ಸಿಗುತ್ತವೆ.

3. ಬಂಡಾಯ ಸಾಹಿತ್ಯಕ್ಕೂ ಪ್ರಗತಿಶೀಲ ಸಾಹಿತ್ಯಕ್ಕೂ ಮುಖ್ಯವಾದ ವ್ಯತ್ಯಾಸವಿದೆ. ಬಂಡಾಯ ಸಾಹಿತ್ಯ ಕಾವ್ಯ ಪ್ರಧಾನವಾಗಿದೆ, ಅಂದರೆ ಅವರಲ್ಲಿ ಕಾವ್ಯ ಪ್ರಕಾರ ಹುಲುಸಾಗಿದೆ. ಪ್ರಗತಿಶೀಲದಲ್ಲಿ ಕಾವ್ಯ ಇಲ್ಲ, ಅದು ಕಥಾ ಪ್ರಧಾನವಾಗಿದೆ. ಅಂದರೆ ಕತೆ ಮತ್ತು ಕಾದಂಬರಿ ಕ್ಷೇತ್ರ ವಿಪುಲವಾಗಿದೆ. ಪ್ರಗತಿಶೀಲ

ಅಲ್ಲಿ ಸಮಾಜ ಸುಧಾರಣೆ ಪ್ರಧಾನವಾಗಿದೆ: ಬಂಡಾಯದಲ್ಲಿ ಸಮಾಜದ ಆಮೂಲಾಗ್ರ ಬದಲಾವಣೆ ಆಗಬೇಕೆಂಬ ವ್ಯಗ್ರತೆಯಿದೆ. ಒಟ್ಟಿನಲ್ಲಿ ಇಬ್ಬರದೂ ಸಮಾಜ ಪರಿವರ್ತನೆಗಾಗಿ ರಚನೆಯಾಗುತ್ತಿರುವುದರಿಂದ ವಸ್ತುವಿನಲ್ಲಿ ಸಾಮ್ಯವೂ ವೈವಿಧ್ಯವೂ ಇದೆ ಎನ್ನಬಹುದು. ಆದರೆ ಬಂಧದ ಬಗ್ಗೆ ಈಗಲೇ ಹೇಳಲು ಸಾಧ್ಯವಿಲ್ಲ. ಕಾರಣ ಬಂಡಾಯ ಸಾಹಿತ್ಯದಲ್ಲಿ ಕಾದಂಬರಿಗಳು ಬಂದಿಲ್ಲ. ಅಥವಾ ಬಂದೆರಡನ್ನು ಬಿಟ್ಟರೆ ಹೆಚ್ಚು ಬಂದಿಲ್ಲ. ಪ್ರಗತಿಶೀಲರಲ್ಲಿ ಬಂದವರಲ್ಲಿ ಹೆಚ್ಚಾಗಿ ಎಲ್ಲರೂ ಕಾದಂಬರಿಕಾರರೇ ಆಗಿರುವುದು ಆ ಚಳುವಳಿಯ ವೈಶಿಷ್ಟ್ಯವೆನ್ನಬಹುದು.

4. ಈ ಬಗ್ಗೆ ನನಗೆ ಎರಡು ಅಭಿಪ್ರಾಯಗಳು ತೋರುತ್ತವೆ. ಒಂದು, ನೀವು ಕೇಳಿರುವ ರೀತಿ ಆಯಾ ಚಳುವಳಿಗಳ ಹಿನ್ನೆಲೆಯಲ್ಲಿ ಅಧ್ಯಯನ ಬೇಕೆನ್ನುವುದು. ಇದು ಸಾಹಿತ್ಯ ಚರಿತ್ರೆಯ ಬರವಣಿಗೆಗೆ ಬೇಕಾಗುವ ಅಂಶಗಳು ಆದರೆ (2) ಸಾಹಿತ್ಯ ಇಷ್ಟಕ್ಕೆ ಸೀಮಿತಗೊಳ್ಳುವುದಿಲ್ಲವೆನಿಸುತ್ತದೆ. ಹಿನ್ನೆಲೆ, ವಿಚಾರ. ಇತ್ಯಾದಿ ಏನೂ ಗೊತ್ತಿಲ್ಲದ ಓದುವ ಒಂದು ಕೃತಿಯನ್ನು ಗ್ರಹಿಸಿ ಅನುಭವಿಸಬಲ್ಲ. ಯಾವುದೇ ಕಾಲದ ದೇಶದ ಭಾಷೆಯ ಕೃತಿಯನ್ನು ಓದುವಾಗಲೂ ಸೆರೆಹಿಡಿಯುವ ವಿಷಯಗಳೆಂದರೆ ಮಾನವಾಂಶ ಮತ್ತು ಕಲಾಂಶಗಳು.

ಹಿನ್ನೆಲೆ ಚಳುವಳಿಗಳು ಮುಂತಾದವುಗಳೆಲ್ಲ ಅರ್ಥಹೀನವಲ್ಲವೆ ಎಂದುಕೊಂಡು ನಾನು 'ಸಂಸ್ಕಾರ' ಕುರಿತ "ಗೊಡ್ಡು ಬ್ರಾಹ್ಮಣ್ಯ ಮತ್ತು ಧೂರ್ತ ಚಾರ್ವಾಕ ಮತ" ವಿಮರ್ಶೆಯನ್ನು (1977) ಬರೆದೆ. ಆಗ ನವ್ಯ ಚಳುವಳಿ, ಅಸ್ತಿತ್ವವಾದಿ ವಿಚಾರಗಳು ತುಂಬ ಭರಾಟೆಯಲ್ಲಿದ್ದ ಕಾಲ. ನಾನು ಆ ಕೃತಿಯ ತಾತ್ವಿಕಾಂಶಗಳು ಕಲಾಂಶಗಳು ಹೇಗೆ ಮೌಲ್ಯರಹಿತವಾಗಿವೆ ಎಂದು ತೌಲನಿಕವಾಗಿ ತೋರಿಸಿದೆ. ಅದನ್ನು ಓದಿದ ಲೇಖಕರೇ "ಯಾರೂ ನನ್ನನ್ನು ಇಷ್ಟು serious (ಗಂಭೀರ)ವಾಗಿ ತೆಗೆದುಕೊಂಡು ಚರ್ಚಿಸಿರಲಿಲ್ಲ", ಎಂದರು.

5. ಈ ಅಲ್ಪಾವಧಿಯಲ್ಲಿ ಬಂದಿರುವ ಕೃತಿಗಳ ಸಂಖ್ಯೆಯೇನೂ ಕಡಿಮೆಯಿಲ್ಲ. ಅದರ ಬಗ್ಗೆ ಸ್ಥೂಲವಾಗಿಯಾದರೂ ಒಂದು ಸಮೀಕ್ಷೆ ನಡೆದಿಲ್ಲದಿರುವುದೇ ನಿಮ್ಮ ಪ್ರಶ್ನೆಗೆ ಕಾರಣವಾಗಿದೆ. ಇದುವರೆಗೆ ಬಂದಿರುವ ಎಲ್ಲಾ ಪ್ರಕಾರಗಳ ಸಾಹಿತ್ಯ ಕೃತಿಗಳನ್ನು ಒಂದೆಡೆ ದೊರಕಿಸಿಕೊಳ್ಳುವುದೇ ಕಷ್ಟವಾಗಿರುವಂತೆ ಕಾಣುತ್ತದೆ. ಅವನ್ನೆಲ್ಲ ಅಭ್ಯಸಿಸಿ ಅವುಗಳ ಶ್ರೇಷ್ಠಾಂಶಗಳನ್ನು ತೋರಿಸಿದಾಗ ಬಂಡಾಯ ಸಾಹಿತ್ಯ ಚಳುವಳಿ ಸೈದ್ಧಾಂತಿಕವಾಗಿ ಬೆಳೆದಷ್ಟು ಸಾಹಿತ್ಯಕವಾಗಿ ಬೆಳೆದಿಲ್ಲ ಎಂಬ ಟೀಕೆ ನಿರಾಧಾರವಾದದ್ದೆಂದು ಗೊತ್ತಾಗುತ್ತದೆ.

6. ಮೇಲಿನ ಪ್ರಶ್ನೆಗಳಿಗೆ ಇದುವರೆಗೆ ನಾನು ನೀಡಿರುವ ಉತ್ತರಗಳಲ್ಲಿ ಇದಕ್ಕೆ ಉತ್ತರವಿದೆ. ಕವಿತೆ ಮತ್ತು ಕತೆಯ ಪ್ರಕಾರಗಳಲ್ಲಿ ಕೆಲವು ಶ್ರೇಷ್ಠ ಕೃತಿಗಳು ಬಂದಿವೆ. ಅವುಗಳ 'ಶ್ರೇಷ್ಠತ್ವ' ಪ್ರದರ್ಶನವೆಂದರೆ. ಅದು ಬೇರೆಯೇ ಲೇಖನವಾಗುತ್ತದೆ: ಅದು ಅನ್ವಯಿಕ ತೌಲನಿಕ ವಿಮರ್ಶೆಯಾಗಬೇಕಾಗುತ್ತದೆ.

# ರತ್ನನ ಪದಗಳ ಕರ್ತೃ ಯಾರು? -ದಾರಿ ತಪ್ಪಿಸುವ ಬರವಣಿಗೆ

—ರಾ. ಲಕ್ಷ್ಮೀನಾರಾಯಣ

ಕನ್ನಡಿಗರ "ಮೊದ್ದು ತನವನ್ನು ಹೋಗಲಾಡಿಸಿ" ಪ್ರಜ್ಞಾವಂತರನ್ನಾಗಿಸಲೇ ಬೇಕೆಂದು ಹಟತೊಟ್ಟಿರುವ ಗುಡಿಬಂಡೆ ಪೂರ್ಣಿಮಾ ಅವರು ಅದಕ್ಕಾಗಿ ರಾಜರತ್ನಂ ಅವರನ್ನು ಬಲಿಪಶು ಮಾಡಲು ಹೊರಟಿರುವುದು ಮಾತ್ರ ಸಾಹಿತ್ಯ ಕ್ಷೇತ್ರದ ಒಂದು ವಿಪರ್ಯಾಸವೇ ಸರಿ. ತಮ್ಮದು ಸಂಶೋಧನೆ ಎಂದವರು ಹೇಳುತ್ತಾರೆ. ಆದರೆ ಪ್ರಸ್ತುತ ಲೇಖನದಲ್ಲಿ ಒಬ್ಬ ಸಂಶೋಧಕಿಗಿರಬೇಕಾದ ಶಿಸ್ತು, ಸಂಯಮ, ವೈಜ್ಞಾನಿಕ ಹಾಗೂ ವೈಚಾರಿಕ ವಿಧಾನಗಳು ಕಾಣೆಯಾಗಿವೆ. ಅದಕ್ಕೆ ಲೇಖನದಲ್ಲಿ ಬಳಸಲಾಗಿರುವ ವ್ಯಂಗ್ಯ, ಅಣಕ, ಮೂದಲಿಕೆಗಳ ಹಾಗೂ ಉದ್ರೇಕಕಾರಿಯಾದ ಭಾಷೆಯೇ ಸಾಕ್ಷಿ. ಸಂಶೋಧಕರಾದವರು, ತಾನು ಹಿಡಿದ ಮೊಲಕ್ಕೆ ಮೂರೇ ಕಾಲು ಎಂಬಂತೆ ಮೊಂಡುವಾದ ಹೂಡದೆ, ಅವರ ವಾದಗಳಲ್ಲಿರುವ ವೈರುಧ್ಯಗಳನ್ನು ಬೇರೆಯವರು ತೋರಿಸಿಕೊಟ್ಟಾಗ ಪ್ರಾಂಜಲವಾದ ಮನಸ್ಸಿನಿಂದ ಒಪ್ಪಿಕೊಳ್ಳುವ ಔದಾರ್ಯ ಹೊಂದಿರಬೇಕಾಗುತ್ತದೆ. ಅದು ಬಿಟ್ಟು-"ನಾಲ್ಕು ಕೋಟಿ ಕನ್ನಡಿಗರೂ ಒಕ್ಕೊರಲಿನಿಂದ ರಾಜರತ್ನಂದೇ ಎಂದರೂ ನನಗೆ ಚಿಂತೆಯಿಲ್ಲ"–ಎಂದು ಹೇಳುವುದಲ್ಲ. ಕಾರಣ

---

'ಅನ್ವೇಷಣೆ' ಸಂಚಿಕೆ 31 (ಮಾರ್ಚ್-ಏಪ್ರಿಲ್ 89) ರಲ್ಲಿ ಗುಡಿಬಂಡೆ ಪೂರ್ಣಿಮಾ ಅವರು ಎತ್ತಿದ 'ರತ್ನನ ಪದಗಳ ಕರ್ತೃ ಯಾರು'? ಎಂಬ ಪ್ರಶ್ನೆಯ ಬರಹ ಬಹಳಷ್ಟು ಓದುಗರಿಗೆ ಹುಬ್ಬೇರಿಸುವಂತೆ ಮಾಡಿದೆ. ಕೆಲವರು ಇದನ್ನು ಪ್ರಕಟಿಸಿದ ಬಗ್ಗೆ ನಮ್ಮನ್ನು ಪ್ರಶ್ನಿಸಿದ್ದಾರೆ. ಹಲವರು ಬರೆದು ಚರ್ಚಿಸಲು ಹಿಂಜರಿದಿದ್ದಾರೆ ಮತ್ತೆ ಕೆಲವರು ಪೂರ್ಣಿಮಾರ ಧಿಟ್ಟತನವನ್ನು ಮೆಚ್ಚಿದ್ದಾರೆ–ಒಟ್ಟನಲ್ಲಿ ಇಂಥ ಬರಹದ ಹಿಂದೆ ತಾತ್ವಿಕ ಜಿಜ್ಞಾಸೆಯಾಗಲಿ, ಸಂಶೋಧನೆಯಾಗಲಿ, ಸಂಶೋಧನೆಯ ತಾಳ್ಮೆಯಾಗಲಿ ಇಲ್ಲವೆಂಬುದು ಬಹಳಷ್ಟು ಸಾಹಿತಿಗಳ ಅನಿಸಿಕೆಯಾಗಿದೆ. ನಮಗೆ ಬಂದ ಅರ್ಥಪೂರ್ಣ ಪ್ರತಿಕ್ರಿಯೆಯೊಂದನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಮತ್ತೆ ಈ ವಿಚಾರ ಹೆಚ್ಚು ಕೆದಕಲು ಇಷ್ಟಪಡುವುದಿಲ್ಲ. (31ರ ಸಂಚಿಕೆಯ ಆ ಬರಹ ಹಲವರು ಭಾವಿಸಿದಂತೆ ಖಂಡಿತಾ 'ತರಂಗ'ದ Re Produce ಬರಹವಲ್ಲ!)

—ಸಂಪಾದಕ

ಸಂಶೋಧನೆಯಲ್ಲಿ ಯಾವಾಗಲೂ "ಇದಮಿತ್ಥಂ" ಎಂಬ ಮಾತೇ ಇಲ್ಲ. ಯಾವುದೇ ವಿಷಯದ ಬಗ್ಗೆ "ಈಗ ತಿಳಿದು ಬಂದಿರುವ ಸಂಗತಿಗಳಿಂದ ಸಧ್ಯಕ್ಕೆ ಈ ತೀರ್ಮಾನಕ್ಕೆ ಬರಬಹುದು" ಎಂದಷ್ಟೇ ಹೇಳಬಹುದು.

"ರತ್ನನ ಪದಗಳು" ರಾಜರತ್ನಂದಲ್ಲ, ಕೈಲಾಸಂ ಅವರೇ ರಚಿಸಿದವರು ಎಂಬುದಕ್ಕೆ ಅವರು ಕೊಟ್ಟಿರುವ ಆಧಾರಗಳು ತೀರ ದುರ್ಬಲವಾದುವು; ಮಾತ್ರವಲ್ಲ ಅವುಗಳಲ್ಲೇ ಪರಸ್ಪರ ವಿರೋಧಗಳಿವೆ. ಅವರ ವಾದಗಳ ದೌರ್ಬಲ್ಯ ಮತ್ತು ಬಿರುಕುಗಳನ್ನು ಹಾಗೂ ಅಂತರ್ವಿರೋಧಗಳನ್ನು ತೋರಿಸಿಕೊಡುವುದಷ್ಟೇ ಈ ಲೇಖನದ ಉದ್ದೇಶ.

'ರತ್ನನ ಪದಗಳು' ಮೊತ್ತ ಮೊದಲು "ಯೆಂಡ್ಕುಡ್ಕರತ್ನ" ಎಂಬ 14 ಕವನಗಳ ಸಂಕಲನವಾಗಿ 1932ರ ಅಕ್ಟೋಬರ್‌ನಲ್ಲಿ ಪ್ರಕಟವಾಯಿತು.

ಮುಂದೆ ಎರಡು ವರ್ಷಗಳಲ್ಲಿ 77 ಕವನಗಳಿಗೆ ಬೆಳೆದು 1934ರಲ್ಲಿ "ರತ್ನನ ಪದಗಳು" ಎಂಬ ಹೆಸರಿನಲ್ಲಿ ಪ್ರಕಟವಾಯಿತು.

1945ರಲ್ಲಿ ಇದರ ಎರಡನೇ ಮುದ್ರಣ ಹೊರಬಂದಿತು. ಅವರ ಹತ್ತು ವರುಷಗಳ ಸಾಹಿತ್ಯ ಸಾಧನೆಯನ್ನು, ರತ್ನನ ಪದಗಳು ಸೃಷ್ಟಿಯಾದ ವಿವರವಾದ ಹಿನ್ನೆಲೆಯನ್ನು ತಿಳಿಸುವ, ಅವರನ್ನು ಸಾಹಿತ್ಯ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸಿದ ರೀತಿಯನ್ನು ಮನದಟ್ಟಾಗಿಸುವ "ಹತ್ತು ವರುಷ" 1938ರಲ್ಲಿ ಪ್ರಕಟವಾಯಿತು.

ಈ ಎಲ್ಲ ವರ್ಷಗಳಲ್ಲಿ ಕೈಲಾಸಂ ಹಾಗೂ ಅವರ ನಿಕಟ ವರ್ತಿಗಳಾದ ಬಿ.ಎಸ್. ರಾಮರಾಯರು, ಕೆ.ವಿ. ಅಯ್ಯರ್ ಅವರು ಬದುಕಿದ್ದರು. ಇವರಾರೂ ರತ್ನನ ಪದಗಳು ಕೃತಿಚೌರವೆಂಬ ಬಗ್ಗೆ ಎಲ್ಲೂ ಚಕಾರವೆತ್ತಿಲ್ಲ. ಈ ಬಗ್ಗೆ ಪೂರ್ಣಿಮಾ ಅವರ ಲೇಖನ ದಿವ್ಯ ಮೌನ ತಾಳಿದೆ.

"ಎಂಡದ್ ತೊಂದ್ರೆ" ಎಂಬ ಕವನವೇ ರಾಜರತ್ನಂ ಮೊದಲು ಬರೆದದ್ದು. ಇದು 1932ರ ಜುಲೈ ತಿಂಗಳಿನಲ್ಲಿ "ಜಯ ಕರ್ನಾಟಕ"ದಲ್ಲಿ ಪ್ರಕಟವಾಯಿತು. ಇದನ್ನು ಕೈಲಾಸಂ ಬರೆದದು ಎಂದು ಶ್ರೀಮತಿ ಪೂರ್ಣಿಮಾ ಕೂಡ ಹೇಳುವುದಿಲ್ಲ. ಕಾರಣ ಅದು ಇಂಗ್ಲಿಷ್ ಕವನವೊಂದರಿಂದ ಕದ್ದದ್ದು ಎಂದು ಅವರು ಭಾವಿಸಿರುವುದರಿಂದ ಹೆಂಡ ಕುಡುಕನೊಬ್ಬನ ಭಾವ ಲಹರಿಗಳನ್ನು ಈ ರೀತಿ ಕನ್ನಡದಲ್ಲಿ ಕಾವ್ಯವಾಗಿಸಲು ತೊಡಗಿದ್ದೇ ರಾಜರತ್ನಂ ಎಂಬುದಂತೂ ನಿರ್ವಿವಾದವೆಂದಾಯಿತು. ಅದಕ್ಕೆ ಮುಂಚೆ ಇಂಥ ಪ್ರಯೋಗ ಕೈಲಾಸಂ ಹೆಸರಿನಲ್ಲಿರುವ ದಾಖಲೆಯಂತೂ ಇಲ್ಲ. ಇದರಲ್ಲಿ ಪ್ರಯೋಗವಾಗಿರುವ ಗ್ರಾಮ್ಯ ಭಾಷೆಗೆ, ಕೈಲಾಸಂ ಇದುವರೆಗಾಗಲೇ ನಾಟಕಗಳಲ್ಲಿ ಹಾಗೂ ಕೆಲವೊಂದು ಹಾಡುಗಳಲ್ಲಿ ಪ್ರಯೋಗಿಸಿರುವ ಗ್ರಾಮ್ಯಭಾಷೆ ಪ್ರೇರಣೆ ನೀಡಿರಬಹುದು. ಕೈಲಾಸಂ ನಾಟಕಗಳ ಭಾಷೆ ಇಂಗ್ಲಿಷ್ ಬೆರೆತ ಕನ್ನಡ

ವಾದ್ದರಿಂದ, ಅವರ ಹಾಡುಗಳ (ಅವುಗಳ ಕಾಲ ತಿಳಿದಿಲ್ಲ) ಭಾಷೆಯ ಪ್ರಭಾವವೇ ಈ ಕವನದ ಮೇಲಾಗಿರಬೇಕು. ಭಾಷೆಯ ಮಟ್ಟಿಗೆ ಶ್ರೀಮಂತಿ ಪೂರ್ಣಿಮಾ ಅವರು ಸಂಶೋಧನೆ ಸೀಮಿತಗೊಂಡಿದ್ದರೆ ಹೆಚ್ಚಿನ ಫಲ ನೀಡುತ್ತಿತ್ತೆನ್ನಬಹುದು. ಆದರೆ ಇಡೀ ರತ್ನನ ಪದಗಳೆಲ್ಲವೂ ಕೈಲಾಸಂ ರಚನೆಗಳು; ಅವನ್ನು ಅನಾಮತ್ತಾಗಿ ರಾಜರತ್ನಂ ತನ್ನ ವೆಂದು ಪ್ರಕಟಿಸಿಕೊಂಡು ಬಿಟ್ಟರೆಂದು ಹೇಳಿದರೆ ಅದಕ್ಕಿಂತ ದುಡ ಕಿನ ತೀರ್ಮಾನ ವಂತೊಂದಿಲ್ಲ.

ಹೆಂಡ ಕುಡುಕನೊಬ್ಬನ ಚರ್ಯೆಗಳನ್ನು ನೋಡಿ ಸ್ಫೂರ್ತಿಗೊಂಡು ಒಂದೇ ದಿನ ದಲ್ಲಿ ಹತ್ತು ಪದ್ಯಗಳನ್ನು ಬರೆದದ್ದನ್ನು ಅವರು ಲೇವಡಿ ಮಾಡಿರುವುದು ಹೀಗೆ— "ಸೃಜನಶೀಲ ಸಾಹಿತ್ಯ ಹೀಗೆ ರಚಿಸಲು ಸಾಧ್ಯವೆ?" ಎಂದು.

ಯಾವುದೋ ಒಂದು ಘಟನೆ, ಸನ್ನಿವೇಶದಿಂದ ಉತ್‌ಸ್ಫೂರ್ತರಾಗಿ ದೊಡ್ಡ ದೊಡ್ಡ ಕಾವ್ಯ, ಕಾವ್ಯ ಖಂಡಗಳನ್ನು ರಚಿಸಿದ ಉದಾಹರಣೆಗಳು ಸಾಹಿತ್ಯ ಜಗತ್ತಿನಲ್ಲಿ ಬೇಕಾದಷ್ಟಿವೆ ಶ್ರೀ ಕುವೆಂಪು ಅವರಿಗೆ ರಾಮಾಯಣ ದರ್ಶನಂ ಬರೆಯುವಾಗ ಒಮ್ಮೆ ನಾಲ್ಕಾರು ತಿಂಗಳು ಬರವಣಿಗೆ ಮುಂದುವರಿಸಲಾಗಲಿಲ್ಲವಂತೆ. ಒಂದು ದಿನ ಅವರ ಮಗ ತೇಜಸ್ವಿ ಏನೋ ಕಾರಣದಿಂದ ಅಳುವುದಕ್ಕೆ ಆರಂಭಿಸಿದನಂತೆ; "ಏಕೋ ಅಳುತ್ತೀಯೆ—" ಎಂದವರೇ ತಮ್ಮ ಕೊಠಡಿಗೆ ಹೋಗಿ "ಏಕಳುವೆ ತೇಜಸ್ವಿ" ಎಂದೇ ಆರಂಭಮಾಡಿ 'ಅತ್ತಲಂ ಕಿಷ್ಕಿಂಧೆಯೊಳ್' ಎಂಬ ಇಡೀ ಸಂಚಿಕೆ ಮುಗಿಸಿದರಂತೆ "ನಮ್ಮ ಮನೆಯ ಮುಂದಣ ಮರದಲ್ಲಿ ಹಕ್ಕಿಯೊಂದು ಟುವ್ವಿ ಟುವ್ವಿ ಎಂದು ಕರೆದುದೇ ಕಾರಣವಾಗಿ "ಓ ಲಕ್ಷಣಾ'' ಎಂಬ ಸಂಚಿಕೆ ಆರಂಭವಾಯಿತು. (ಶ್ರೀ ಕುವೆಂಪು ಸಂದರ್ಶನ—ಪುಟ–127-ಕೋ.ಚನ್ನಬಸಪ್ಪ) ಹೀಗೆ ಸ್ಫೂರ್ತಿ ಹೇಗೆ ಬರುತ್ತದೆಂಬುದನ್ನಾಗಲಿ, ಅದರಿಂದ ಎಷ್ಟೆಲ್ಲಾ ನಿರ್ಮಿತಿ ಸಾಧ್ಯವೆಂಬುದನ್ನಾಗಲಿ ಹೇಳಲು ಸಾಧ್ಯವಿಲ್ಲ.

ರಾಜರತ್ನಂ ಅವರ ಆಮೇಲಿನ ಕೃತಿಗಳನ್ನು ಹೆಸರಿಸಿ, ಅವುಗಳಲ್ಲಿ ರತ್ನನ ಪದ ಗಳಲ್ಲಿ ವ್ಯಕ್ತವಾಗಿರುವ ಪ್ರೀತಿ, ಪ್ರೇಮ, ಗ್ರಾಮ್ಯಭಾಷೆ, ದೈವ, ನಂಬಿಕೆಗಳನ್ನು ಲಘುವಾಗಿ ಕಾಣುವ ಪ್ರವೃತ್ತಿ, ಇವೆಲ್ಲ ಕಾಣುವುದಿಲ್ಲವೆಂದು ಹೇಳಿದರೆ, ಏನಂತಾನೆ ಹೇಳಲು ಸಾಧ್ಯ? ಅಂಥದಿನ್ನೊಂದನ್ನು ಅವರು ಬರೆಯಲಿಲ್ಲ ಎಂದಷ್ಟೇ ಹೇಳ ಬಹುದು. ಮೇಲಾಗಿ ಯಾವ ಲೇಖಕನೇ ಆದರೂ ಅದೇ ರೀತಿಯ ಭಾಷೆ ಮನೋ ಧರ್ಮವಿರುವ ಕೃತಿಗಳನ್ನು ಬರೆಯುತ್ತಾನೆಂದಾಗಲಿ, ಬರೆಯಬೇಕೆಂದಾಗಲಿ ಎಲ್ಲಿದೆ? 'ಅಶ್ವತ್ಥಾಮನ್' ಬರೆದ 'ಶ್ರೀ'ಯವರೇ 'ಇಂಗ್ಲಿಷ್ ಗೀತೆಗಳು' ರಚಿಸಿದ ರೆಂದು ಹೇಳಿದರೆ, ಆ ವಿಷಯ ಗೊತ್ತಿಲ್ಲದವರು ಯಾರಾದರೂ ನಂಬಲು ಸಾಧ್ಯವೆ ? ಭಾಷೆ ರೀತಿ, ವಸ್ತು, ಆಶಯ, ಮನೋಧರ್ಮಗಳಲ್ಲಿ ಅವೆರಡಕ್ಕೂ ಆಕಾಶ ಪಾತಾಳ ಗಳಷ್ಟು ಅಂತರವಿದೆ.

ಅವರು ಹೇಳುವ ಇನ್ನೊಂದು ಮಾತು ತೀರಾ ಅರ್ಥವಿಲ್ಲದ್ದು. ಅದೆಂದರೆ ರತ್ನನ ಪದಗಳ ನಂತರ ಸುಮಾರು 40 ವರ್ಷಗಳ ಅಂತರದಲ್ಲಿ ಒಂದಾದರೂ ಸೃಜನ ಶೀಲ ಸ್ವತಂತ್ರ ಕೃತಿ ರಚಿಸಿಲ್ಲ. ಆದ್ದರಿಂದ 'ರತ್ನನ ಪದಗಳು' ಅವರ ರಚನೆಯಾಗಿರ ಲಾರದು ಎಂಬುದು.

ನಮ್ಮ ಸಾಹಿತ್ಯದ, ಜಗತ್ತಿನ ಸಾಹಿತ್ಯದ ಅಲ್ಪಸ್ವಲ್ಪ ತಿಳುವಳಿಕೆ ಇರುವ ವರ್ಯಾರೂ ಇಂಥ ಹಾಸ್ಯಾಸ್ಪದ ಮಾತನ್ನು ಹೇಳಲಾರರು. ಕೇವಲ ಒಂದೋ ಎರಡೋ ಸ್ವತಂತ್ರ ಕೃತಿ ರಚಿಸಿ ಹೆಸರಾಗಿ, ಉಳಿದ ಜೀವಮಾನದಲ್ಲಿ ಇನ್ನೇನನ್ನೂ ರಚಿಸದೇ ಇದ್ದವರೂ ಇದ್ದಾರೆ. ಥಾಮಸ್‌ಗ್ರೇ ಬರೆದದ್ದು ಒಂದೇ ಒಂದು ಸೊಗಸಾದ ಕವಿತೆ ಯನ್ನು. ಕೆಲವರಲ್ಲಿ ಒಂದು ವಯಸ್ಸಿನಲ್ಲಿದ್ದ ಸ್ಫೂರ್ತಿ ಬೇರೆ ಬೇರೆ ವಯೋಮಾನ ದಲ್ಲಿ ಇಲ್ಲದೆ ಹೋಗಬಹುದು. ಮಿಲ್ಟನ್ ಕವಿ 25 ವರ್ಷ ಏನನ್ನೂ ಬರೆಯಲಿಲ್ಲ. ವರ್ಡ್ಸ್‌ವರ್ತ್ ಮೊದಮೊದಲು ಬರೆದ ಆವೇಶದಿಂದ ಅನಂತರ ಬರೆಯಲಾಗಲಿಲ್ಲ. (ಕಾವ್ಯಾರ್ಥ ಚಿಂತನ,ಪುಟ–74) ನಮ್ಮ ಕಾಲದಲ್ಲೇ ಆಚಾರ್ಯ ತೀ.ನಂ. ಶ್ರೀಯವರು ತಮ್ಮ 'ಒಲಿಂಪೆ' ಎಂಬ ಪ್ರಣಯ ಗೀತಗಳ ಸಂಕಲನದ ಮೂಲಕ ಕಾವ್ಯಕ್ಷೇತ್ರ ಪ್ರವೇಶಿಸಿದರು. ಅದು ರಸಿಕರ ಅಪಾರ ಮೆಚ್ಚಿಗೆ ಗಳಿಸಿತು. ಕನ್ನಡದಲ್ಲಿ ಅದೇ ಅಂಥ ಮೊದಲ ಪ್ರಯತ್ನ. ಅನಂತರ ಅವರು ಉಳಿದ ಜೀವಮಾನವೆಲ್ಲ ಕೃಷಿ ಮಾಡಿದ್ದು ವಿದ್ವತ್ತಿನ, ಸಂಶೋಧನೆಯ ಕ್ಷೇತ್ರದಲ್ಲಿ. ಸ್ವತಂತ್ರ ಕಾವ್ಯ ರಚನೆ, ಸೃಜನ ಶೀಲ ಕೃತಿ ರಚನೆ ನಿಂತೇ ಹೋಯಿತು. ಹಾಗೆಂದ ಮಾತ್ರಕ್ಕೆ 'ಒಲಿಂಪೆ' ರಚಿಸಿದ್ದು ಸುಳ್ಳೆ ?

ಇದಕ್ಕೆ ತೀರಾ ವಿರುದ್ಧವಾದ ಇನ್ನೊಂದು ಉದಾಹರಣೆ ಶ್ರೀ ಎಸ್.ಎಸ್. ಭೂಸನೂರ ಮಠ್ ಅವರದ್ದು. ಅವರು ವಿದ್ವತ್ತಿನ, ಸಂಶೋಧನೆಯ ಕ್ಷೇತ್ರದಲ್ಲಿ ಹೆಸರಾದವರು. ಕಾವ್ಯದ ಕಡೆ ಮರೆತೂ ಕಣ್ಣು ಹಾಯಿಸಿದವರಲ್ಲ. ಅಂಥವರು ಈಗ್ಗೆ ಕೆಲವು ವರ್ಷಗಳ ಹಿಂದೆ "ಭವ್ಯ ಮಾನವ" ಎಂಬ ಕಾವ್ಯ ರಚಿಸಿ, ಅದಕ್ಕೆ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದರು. ವಿದ್ವತ್ತು ಸಂಶೋಧನ ಕ್ಷೇತ್ರಗಳಲ್ಲೇ ತಮ್ಮೆಲ್ಲ ಸಾಧನೆ ಮಾಡಿದ ಮಹಾ ಪಂಡಿತ ಶ್ರೀ ಆರ್. ನರಸಿಂಹಾಚಾರ್ಯರು "ನಗೆ ಗಡಲು"ವಿನಂಥ ಲಘು ವಿನೋದ ಕೃತಿ ರಚಿಸಿದರೆಂದರೆನಂಬಲು ಸಾಧ್ಯವೆ?

ಇದಕ್ಕೆಲ್ಲ ಮನುಷ್ಯನ ಪ್ರತಿಭೆ ಕೆಲಸ ಮಾಡುವ ರೀತಿಯೇ ವಿಚಿತ್ರ ಎಂದಷ್ಟೇ ಹೇಳಬೇಕು. ಅದು ಬಿಟ್ಟು ರಾಜರತ್ನಂ ಅವರ ವಿದ್ಯೆ, ಸಂಸ್ಕಾರ, ಪ್ರವೃತ್ತಿ, ಬದುಕು, ನಂಬಿಕೆ, ಆಶಯ ಇವುಗಳಿಗೂ ರತ್ನನ ಪದಗಳ ರಚನೆಯ ಮೂಲ ಉದ್ದೇಶಕ್ಕೂ ಸಂಬಂಧ ಇಲ್ಲವೆನ್ನುವುದು ಎಷ್ಟು ಮಟ್ಟಿಗೆ ಸರಿ? ವ್ಯಕ್ತಿಯ ಪ್ರವೃತ್ತಿ ವ್ಯಕ್ತಿತ್ವ, ಅವನ ಸಾಹಿತ್ಯ ಇರುತ್ತದೆಂಬ, ಇರಬೇಕೆಂಬ ವಾದವೇ ಅತ್ಯಂತ ವಿವಾದಾ ಸ್ಪದವಾದದ್ದು. ಸಾಹಿತ್ಯಕ್ಕೂ ಸಾಹಿತ್ಯಕಾರನ ಬದುಕಿಗೂ ಎಷ್ಟರ ಮಟ್ಟಿನ

ಸಂಬಂಧವಿರುತ್ತದೆ, ಅಥವಾ ಎಷ್ಟರ ಮಟ್ಟಿಗೆ ಅವನ ಬದುಕು ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ. ಸಾಹಿತ್ಯ ಸೃಷ್ಟಿ ಒಂದು ಮಾನಸಿಕ ಸ್ಥಿತಿ. ಆ ಸಂದರ್ಭದಲ್ಲಿ ಅವನ ಮನಸ್ಸಿಗೆ ಏನು ಅನ್ನಿಸುತ್ತದೋ ಅದಷ್ಟು ಅವನ ಸಾಹಿತ್ಯದಲ್ಲಿ ಮೂಡಿ ಬರುತ್ತದೆ. ಅದರಲ್ಲಿ ಅವನ ಬದುಕಿನ ನಂಬಿಕೆ ಆಶಯ, ಪ್ರವೃತ್ತಿಗಳು ವ್ಯಕ್ತವಾಗಬಹುದು ; ಆಗದಿರಬಹುದು.

ವೈಯಕ್ತಿಕ ಜೀವನದಲ್ಲಿ ಅತ್ಯಂತ ಶ್ರದ್ಧಾಳುವಾಗಿದ್ದ ವಿ.ಸೀ.ಯವರು ದೇವರ ಅಸ್ತಿತ್ವವನ್ನೇ ಪ್ರಶ್ನಿಸುವ "ಕಸ್ಮೈದೇವಾಯ"ದಂಥ ಕವನ ಬರೆದಿದ್ದಾರೆಂಬುದು ನಿಜವಲ್ಲವೆ ? ಅಂತೆಯೇ ದೇವರ ಬಗ್ಗೆ ಅನನ್ಯ ಶ್ರದ್ಧೆ ನಂಬಿಕೆಗಳಿದ್ದ ಬೇಂದ್ರೆಯವರು "ದೇವರದೊಂದು ಗೋರಿಯ ಕಟ್ಟಿ, ಧರ್ಮದ ಧೂಪಕ್ಕೆ ಬೆಂಕಿಯ ನಿಕ್ಕಿ'' ಎಂದೂ ಹತ್ತವತಾರದ ಹೇಡಿತನಕ್ಕೆ ಮನ ಗೊಣಗುಟ್ಟುವುದು ಎಂದೂ ಬರೆದಿದ್ದಾರಲ್ಲ ! ಮಠದ ಸ್ವಾಮಿಯಾಗಿದ್ದ ಷಡಕ್ಷರಿ ಶೃಂಗಾರಕ್ಕೆ ಹೆಸರಾದ ರಾಜಶೇಖರ ವಿಳಾಸ ರಚಿಸಿಲ್ಲವೆ? ಸ್ವತಃ ರಾಜರತ್ನಂ ಅವರೇ ತಮ್ಮ 'ಪುರುಷ ಸರಸ್ವತಿ'ಯಲ್ಲಿ (ಅದೊಂದು ಸೃಜನಶೀಲ ಕೃತಿಯೂ ಹೌದು) ದೇವರುಗಳನ್ನು ಲಘುವಾಗಿ ಕಂಡಿದ್ದಾರಲ್ಲ! ಆದ್ದರಿಂದ ರಾಜರತ್ನಂ ಸುರಾಪಾನ ಮಾಡಿ ಅನುಭವಪಡೆದವರಲ್ಲದಿರಬಹುದು ; ಕೈಲಾಸಂ ಅವರಂತೆ. ಸಾಹಿತಿಯಾದವನು ಎಲ್ಲವನ್ನೂ ಸ್ವತಃ ಅನುಭವಿಸಿಯೇ ಬರೆಯಬೇಕೆನ್ನುವುದು ಅರ್ಥವಿಲ್ಲದ್ದು. ಲೋಕ ನಿರೀಕ್ಷೆಯಿಂದಲೂ ಸಾಹಿತಿ ಅನುಭವಗಳಿಸಬಲ್ಲ. ಹಾಗೆ ಪಡೆದ ಅನುಭವವನ್ನು ತನ್ನ ಕಲ್ಪನೆಯ ಮೂಸೆಯಲ್ಲಿಟ್ಟು ಸಾಹಿತ್ಯ ಕೃತಿ ನಿರ್ಮಿಸುತ್ತಾನೆ. ಹಾಗಲ್ಲದಿದ್ದರೆ ವೇಶ್ಯೆಯರ ಬದುಕನ್ನು ಕುರಿತು ಬರೆಯಲು ಸ್ವತಃ ಅನುಭವ ಪಡೆದಿರಬೇಕೆಂದು ನಿರೀಕ್ಷಿಸಿದಷ್ಟೇ ಬಾಲಿಶವಾಗುತ್ತದೆ. ಮಾಫಿಯಾ ಗ್ಯಾಂಗುಗಳ ಪ್ರತ್ಯಕ್ಷ ಪರಿಚಯವಿಲ್ಲದೆ ಮಾರಿಯೋ ಪೂಜೋ "ಗಾಡ್‌ಫಾದರ್" ಸೃಷ್ಟಿಸಿದ. ಕಾರಂತರಾದರೋ 'ಕುಡಿಯರ ಕೂಸು' ಬರೆಯುವ ಸಂದರ್ಭದಲ್ಲಿ ಮಲೆ ಕುಡಿಯರ ಜೀವನ ಅಭ್ಯಸಿಸಲು ಅವರ ಹಟ್ಟಿಯಲ್ಲೇ ಕೆಲವು ತಿಂಗಳು ಗುಡಿಸಲು ಹಾಕಿಕೊಂಡಿದ್ದು ಆ ಮೂಲಕ ಅನುಭವ ಗಳಿಸಿಕೊಂಡರು. ರಾಜರತ್ನಂ ಕೂಡ ಪಡಖಾನೆಯಲ್ಲಿ ಕುಡುಕರ ಸಂಪರ್ಕ ಬೆಳೆಸಿ, ಅನುಭವಗಳಿಸಿಕೊಂಡುದಾಗಿ ಹೇಳುತ್ತಾರೆ. ಅದನ್ನು ಶಂಕಿಸುವ ಕಾರಣವಿಲ್ಲ. ಒಮ್ಮೆ ಆಗಲೇ ಆ ಅನುಭವವಾಗಿದ್ದರಿಂದ, "ನಾಗನ ಪದಗಳು'' ಬರೆವ ಕಾಲಕ್ಕೆ ಇನ್ನೊಮ್ಮೆ ಅವರಿಗೆ ಕುಡುಕರ ಸಂಪರ್ಕ ಅಗತ್ಯವೆನಿಸಲಿಲ್ಲ.

ಇನ್ನು ರತ್ನನ ಪದಗಳ ಭಾವ ಪ್ರಪಂಚ ಸ್ವತಃ ರಾಜರತ್ನಂಗೆ ಅಪರಿಚಿತವಾದದ್ದೇನಲ್ಲ. ಹೆಂಡ ಕುಡುಕನ ಭಾಷೆ ಎಂಬುದು ಹೊರಗಿನ ಪರಿವೇಷ. ಸ್ವತಃ ಬಡತನವನ್ನು ಅದರ ನಗ್ನ ಸ್ವರೂಪದಲ್ಲಿ ನೋಡಿದ್ದರಾದ್ದರಿಂದ ಬಡವರ ಪರವಾದ ಕಾಳಜಿ ಇದೆ. ಇಲ್ಲಿ ಬರುವ ಪುಟ್ನಂಜಿ, ರತ್ನ ಪುಟ್ನಂಜಿಯರ ಗಾಢ ಪ್ರೇಮ, ಪುಟ್ನಂಜಿಯ

ಸಾವು-ಇವೆಲ್ಲವೂ ಸ್ವತಃ ರಾಜರತ್ನಂ ಅವರ ವೈಯಕ್ತಿಕ, ಜೀವನ ಸಂಗತಿಗಳ ಕವನ ರೂಪಗಳಷ್ಟೆ. 'ಮಡಿಕೇರೀಲಿ ಮಂಜು', 'ಮಡಿಕೇರೀಲಿ ರತ್ನ' ಎರಡೂ ಮಡಿಕೇರಿ ಸಾಹಿತ್ಯ ಸಮ್ಮೇಳನದ ಕಾಲದ ತಮ್ಮ ಅನುಭವ ಎಂಬ ಅವರ ಮಾತನ್ನು ಅನುಮಾನಿಸಬೇಕಾದ್ದಿಲ್ಲ. ಕಾರಣ ಇವೆಲ್ಲ 1932-34ರವರೆಗಿನ ಕಾಲದಲ್ಲಿ ರಚಿತವಾದುವು. ದೇವರ ಬಗೆಗಿನ ಲಘು ಭಾವನೆ ಮೇಲು ಮೇಲಿನದು. ದೈವದ ಬಗ್ಗೆ ಗಾಢ ನಂಬಿಕೆ ಶ್ರದ್ಧೆಗಳಿರುವ ಕವನಗಳೂ ಇವೆ. (ಉದಾ : ದೇವ್ರು—ಪದ್ಯ 64, ಪುಟ 94)

ರತ್ನನ ಪದಗಳಲ್ಲಿ ಕಂಡು ಬರುವ ವೈವಿಧ್ಯಮಯವಾದ ಛಂದೋ ಪ್ರಯೋಗಗಳು ಬೆರಗುಗೊಳಿಸುವಂಥವು. ಶ್ರೀಯವರ "ಇಂಗ್ಲಿಷ್ ಗೀತೆಗಳು" "ಹೊಸ ಕವಿತೆಯ ನಾಡಿನಲ್ಲಿ ಹೆದ್ದಾರಿಗಳನ್ನು ತೆರೆದು" ಬಗೆ ಬಗೆಯ ಛಂದೋ ಪ್ರಯೋಗಗಳಿಗೆ ದಾರಿ ತೋರಿಸಿತ್ತು. ಕುವೆಂಪು, ಬೇಂದ್ರೆ ಮೊದಲಾದವರು ಈ ದಾರಿಯಲ್ಲಿ ಅದುವರೆಗಾಗಲೇ ಮುನ್ನಡೆದಿದ್ದರು. ಶ್ರೀಯವರ ವಿದ್ಯಾರ್ಥಿಯಾದ ರಾಜರತ್ನಂಗೆ ಇವೆಲ್ಲದರ ಪರಿಚಯ ಚೆನ್ನಾಗಿತ್ತು. ಅದುವರೆಗಾಗಲೇ ಕವನಗಳನ್ನು ಬರೆದು ಕೈ ಪಳಗಿಸಿಕೊಂಡಿದ್ದರು. ಹೀಗಾಗಿ ಅವರಿಗೆ ಈ ದಾರಿಯಲ್ಲಿ ಇನ್ನೂ ಹೆಚ್ಚಿನ ಪ್ರಯೋಗಗಳನ್ನು ಮಾಡಲು ಸಾಧ್ಯವಿತ್ತು. ಆ ಪ್ರಯೋಗ ವೈವಿಧ್ಯ ರತ್ನನ ಪದಗಳಲ್ಲಿ ಕಂಡು ಬರುತ್ತದೆ.

"ಯೆಂಡ್ಕುಡ್ಕ ರತ್ನ" ಪ್ರಕಾಶಕರ ಹೆಸರಿಲ್ಲದೆ (ಲೇಖಕರ ಹೆಸರಿತ್ತು) ಬೆಲೆ ನಮೂದಿಸದೆ ಪ್ರಕಟಿಸಿದ್ದರ ಬಗೆಗೂ ಅನುಮಾನ ವ್ಯಕ್ತಪಡಿಸಿ, ಅದೇ 'ಚೀನಾ ದೇಶದ ಬೌದ್ಧ ಯಾತ್ರಿಕರು'ನಲ್ಲಿ ಪ್ರಕಾಶಕರ ಹೆಸರು, ಬೆಲೆ, ಎರಡೂ ಇದೆ—ಹೇಗೆ ಎಂದು ಕೇಳಿದ್ದಾರೆ.

'ಯೆಂಡ್ಕುಡ್ಕ ರತ್ನ' ಪ್ರಕಟಿಸಲು ಬೇರಾರೂ ಪ್ರಕಾಶಕರು ಸಿಕ್ಕದ್ದರಿಂದ, ತಮಗೆ ಬಹುಮಾನವಾಗಿ ಬಂದಿದ್ದ ಶ್ರೀಯವರ ಚಿನ್ನದ ಪದಕವನ್ನು ಅಡವಿಟ್ಟು ಬಂದ ಹಣದಿಂದ ತಾವೇ ಅಚ್ಚು ಹಾಕಿಸಿ ಪ್ರಕಟಿಸಿದ್ದಾಗಿ ಬೇರೊಂದು ಕಡೆ ಹೇಳಿಕೊಂಡಿದ್ದಾರೆ. ಬೆಲೆ ನಮೂದಿಸಿಲ್ಲವಾದರೂ 1 ಆಣೆ ಬೆಲೆಗೆ ಬೆಂಗಳೂರಿನ ಪ್ರೋಗ್ರೆಸ್ ಬುಕ್‌ಸ್ಟಾಲ್‌ನವರೂ, ರಾಮಮೋಹನ್ ಕಂಪೆನಿಯವರೂ ಕೊಂಡುದಾಗಿ ಹೇಳಿದ್ದಾರೆ (ನೋಡಿ-ರತ್ನನ ಪದಗಳು ಕುರಿತು, ಭಾಗ 2-ಪುಟ 28) ಈ ಸಂಗತಿ ಪತ್ತೆ ಹಚ್ಚಿದ್ದರಿಂದ ಯಾವ ಮಹತ್ವದ ಸಂಗತಿ ಕಂಡು ಹಿಡಿದಂತಾಯಿತು? ಚೀನಾ ದೇಶದ ಬೌದ್ಧ ಯಾತ್ರಿಕರು ಪ್ರಕಟಿಸಿದವರು ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದವರು.

"ಹತ್ತು ವರುಷ" ಅದರ ಹೆಸರೇ ಸೂಚಿಸುವಂತೆ ರಾಜರತ್ನಂ ಅವರ ಹತ್ತು ವರುಷಗಳ ಸಾಹಿತ್ಯ ಸಾಧನೆಯ ವಿವರಗಳನ್ನೊಳಗೊಂಡಿರುವ ಪುಸ್ತಕ. ಅದರಲ್ಲಿ ಅವರ ಸಾಹಿತ್ಯದ ಗುರುಗಳ, ಸ್ನೇಹಿತರ, ಬಂಧುಗಳ ಯಾವ ವಿವರವಾದ ಪ್ರಸಕ್ತಿಯೂ ಇಲ್ಲ. ಅಂದಮೇಲೆ ಅದರಲ್ಲಿ ಕೈಲಾಸಂಗೂ ತಮಗೂ ಇದ್ದ ಸಂಬಂಧ, ಅವರ ರೂಮಿಗೆ ಹೋಗುತ್ತಿದ್ದ ವಿಷಯ, ಅವರು ರತ್ನನ ಪದ ಮೆಚ್ಚಿದ ವಿಚಾರ ವನ್ನು ಹೇಳಿಲ್ಲದಿರುವುದೇನೂ ಆಶ್ಚರ್ಯವೆನಿಸುವುದಿಲ್ಲ. "ಕೈಲಾಸಂ ನೆನಪಿನಲ್ಲಿ ಅದನ್ನು ಪ್ರಸ್ತಾಪಿಸಿರುವುದು ತೀರ ಸಹಜವೇ ಆಗಿದೆ. ಅದನ್ನು ಅನುಮಾನ ಪಡುವ ಕಾರಣ ವಿಲ್ಲ.

ಇದಿಷ್ಟೇ ಸಾಲದೆಂಬಂತೆ "ನಾಗನ ಪದಗಳು" ಕೂಡ ಕೈಲಾಸಂ ವಿರಚಿತಗಳೇ ಎಂದು ಹೇಳಿ-ಇವು ರತ್ನನ ಪದಗಳ ರಚನೆಯ ಕಾಲದಲ್ಲೇ ತಡವಾಗಿ ರಚಿತವಾದರೂ, ಅದರ ಎರಡನೇ ಮುದ್ರಣ ಕಾಲದಲ್ಲಿ (1945) ಸೇರಿಸಲು ಧೈರ್ಯ ಸಾಲದೆ, ಕೈಲಾಸಂ ಮತ್ತು ಅವರ ಸಮೀಪವರ್ತಿಗಳಲ್ಲಿ ಅನುಮಾನ ಪಟ್ಟಿದ್ದವರು ನಿಧನರಾದ ನಂತರ ಅದೇ ಪದಗಳು ಪ್ರಕಟವಾಗಿವೆ (1952) ಎಂದು ಹೇಳಿರುವುದು ಗಂಭೀರವಾಗಿದ್ದರೆ ಒಂದು ದೊಡ್ಡ ಜೋಕ್ ಎಂದು ನಕ್ಕು ಸುಮ್ಮ ಸುಮ್ಮನಾಗಬೇಕಷ್ಟೆ! "ಯೆಂಡ್ಕುಡ್ಕ ರತ್ನ" (1932) ಮತ್ತು ರತ್ನನ ಪದಗಳು (1934) ಪ್ರಕಟವಾದಾಗ ಕೈಲಾಸಂ ಅವರಿಂದಾಗಲಿ, ಅವರ ಸಮೀಪವರ್ತಿಗಳಿಂದಾಗಲಿ ಆಕ್ಷೇಪ ಬರಲಿಲ್ಲ. ಎಂದಮೇಲೆ ಆಗ ಇದ್ದ ಧೈರ್ಯ, ಅದರ ಎರಡನೇ ಮುದ್ರಣದ ಕಾಲಕ್ಕೆ (1945) ಇವನ್ನು ಅದರಲ್ಲಿ ಸೇರಿಸಲು ಇರಲಿಲ್ಲ ಎಂದರೆ ಏನು ಹೇಳಬೇಕು ? ಅದಕ್ಕೆ ಕೈಲಾಸಂ ಹಾಗೂ ಮಿತ್ರರೇ ಸಾಯುವವರೆಗೂ ಕಾದರು ಎಂದರೆ ಇದು ಯಾವ ಸಂಶೋಧನೆ ? ಇದು (ನಾಗನ ಪದಗಳು) ಪ್ರಕಟವಾಗುವ ಮುನ್ನ ಅವರೆಲ್ಲರೂ ಸಾಯುತ್ತಾರೆಂದು ಅವರು ಕನಸು ಕಂಡಿದ್ದರೆ? ಅಥವಾ ತಾನಾದರೂ ಅಲ್ಲಿಯವರೆಗೂ ಬದುಕಿರುತ್ತೇನೆಂದು ಅವರಿಗೆ ಖಾತರಿಯಾಗಿತ್ತೆ ? 1952ರಲ್ಲಿ ಕೆ.ವಿ.ಅಯ್ಯರ್, ಬಿ.ಎಸ್. ರಾಮರಾವ್ ಇವರೆಲ್ಲ ಇನ್ನೂ ಬದುಕಿಯೇ ಇದ್ದರು. (ನಾಗನ ಪದಗಳ ಪ್ರಕಟನಾವರ್ಷ)

ಇದು ರಾಜರತ್ನಂ ಕೃತವಲ್ಲವೆಂಬುದಕ್ಕೆ ಕೊಡುವ ಇನ್ನೊಂದು ಕಾರಣವೂ ತಮಾಷೆಯಾಗಿದೆ. ರಾಜರತ್ನಂ ಅವರ ಮಾಗಿದ ಅನುಭವ, ಅನೇಕ ರಂಗಗಳ ಪರಿಚಯ ಇದರಲ್ಲಿ ಇಲ್ಲದಿರುವುದರಿಂದ ಇದು ಆಗಲೇ-ಅಂದರೆ ರತ್ನನ ಪದಗಳ ಕಾಲದಲ್ಲೇ ರಚಿತವಾದದ್ದು. ಯಾವುದೇ ಒಬ್ಬ ಲೇಖಕನ ವಿಚಾರದಲ್ಲಿ, ಅವನ ಪರಿಣತ ವಯಸ್ಸಿನಲ್ಲಿ ರಚಿತವಾದ ಕೃತಿಗಳಲ್ಲಿ ಮೊದಲು ರಚಿತವಾದ ಕೃತಿಗಳಿಗಿಂತ ಹೆಚ್ಚಿನ ಪರಿಪಕ್ವತೆ, ವಿಚಾರದ ಹರಿತ, ಅನುಭವಗಳ ವಿಸ್ತಾರ ಇದ್ದೇ ಇರುತ್ತದೆಂದಾಗಲಿ, ಇರಬೇಕೆಂದಾಗಲಿ ಹೇಳಿದರೆ, ಅದು ಸಹೃದಯರ ನಿರೀಕ್ಷೆಯಾದೀತೆ ಹೊರತು,ಇದ್ದೇ

ಇರುತ್ತದೆಂದಾಗಲಿ, ಇರಲೇಬೇಕೆಂದಾಗಲಿ ಹೇಳಲು ಸಾಧ್ಯವೆ?" ಅದಕ್ಕೆ ವಿರುದ್ಧವಾಗಿ ಮೊದಲು ಬರೆದ ಕೃತಿಗಳೇ ಶ್ರೇಷ್ಠ ಕೃತಿಗಳಾಗಿ ಅನಂತರದವು ಹಾಗಾಗದೆ ಇರುವ ಎಷ್ಟು ಉದಾಹರಣೆಗಳಿಲ್ಲ? ಮಿಲ್ಟನ್ ಮೊದಲು ಬರೆದ 'ಪ್ಯಾರಾಡೈಸ್ ಲಾಸ್ಟ್' ಅನಂತರ ಬರೆದ 'ಪ್ಯಾರಾಡೈಸ್ ರೀಗೇನ್ಡ್'ಗಿಂತಲೂ ಶ್ರೇಷ್ಠವೆಂದು ಪರಿಗಣಿತ ವಾಗಿಲ್ಲವೆ? ಮಂಕು ತಿಮ್ಮನ ಕಗ್ಗಕ್ಕಿಂತ ಮರುಳ ಮುನಿಯನ ಕಗ್ಗ ಹೆಚ್ಚು ಪರಿಣತ ಕೃತಿಯೆ? ಕಾರಂತರ ಮರಳಿ ಮಣ್ಣಿಗೆ, ಚೋಮನದುಡಿ, ಅಳಿದ ಮೇಲೆ, ಮುಂತಾದ ಕಾದಂಬರಿಗಳೇ ಅವರ ಈಚಿನ ಕಾದಂಬರಿಗಳಿಗಿಂತ ಎಲ್ಲ ರೀತಿಯಲ್ಲಿ ಶ್ರೇಷ್ಠ ಎಂಬುದು ಸಹೃದಯರ ಸಾಮಾನ್ಯ ಅನಿಸಿಕೆ. ಅ.ನ.ಕೃ. ಅವರ ಸಂಧ್ಯಾರಾಗ, ಉದಯರಾಗ, ಮಂಗಳ ಸೂತ್ರ ಕಾದಂಬರಿಗಳೇ ಅನಂತರದ ಕಾದಂಬರಿಗಳಿಗಿಂತ ಶ್ರೇಷ್ಠ. ಅಂತೇ ಬೇಂದ್ರೆಯವರ ಭಾವಗೀತಗಳು ಇದಕ್ಕೆ ಹೊರತಲ್ಲ. ರತ್ನನ ಪದಗಳನ್ನು ಬರೆದು ಕುದುರಿದ್ದಷ್ಟೇ ಇನ್ನಷ್ಟು ಅಂಥವನ್ನು ಯಾಂತ್ರಿಕವಾಗಿ ನಿರ್ಮಿಸಿತೆಂದಷ್ಟೇ ಹೇಳ ಬಹುದು. ಹಾಗಾಗಿ ಮೊದಲಿನ ಪದಗಳಲ್ಲಿ ಕಂಡುಬರುವ ಶಕ್ತಿ, ಪ್ರತಿಭೆ, ಇಲ್ಲ ವೆನ್ನಿಸಬಹುದು. ಆದರೆ ಅದಕ್ಕಿಂತ ಭಿನ್ನವಾದ, ಸಂತೋಷ ತುಂಬಿದ ಸಂಸಾರಿಕ ಚಿತ್ರಗಳಿವೆ.

ಲೇಖಕರ ವ್ಯಕ್ತಿತ್ವ ಮತ್ತು ಶೈಲಿ ಎರಡೂ ಒಂದೇ ಎಂದು ತಿಳಿದು ಬರೆದಂತೆ ತೋರುತ್ತದೆ. Style is the man 'ಶೈಲಿಯೇ ವ್ಯಕ್ತಿ' ಎಂಬ ಮಾತೇನೋ ಇದೆ. ಆದರೆ ಇದು ಒಂದೇ ರೀತೀಯ ಸಾಹಿತ್ಯ ಪ್ರಕಾರವನ್ನು ಗಣನೆಗೆ ತೆಗೆದು ಕೊಂಡಾಗ, ಲೇಖಕರ ಶೈಲಿ ಒಂದೇ ರೀತಿ ಇರುವುದನ್ನು ಕಾಣಬಹುದು. ಉದಾಹರಣೆಗೆ ಕಾರಂತ, ನಿರಂಜನ, ಭೈರಪ್ಪ, ತ.ರಾ.ಸು, ಚಿತ್ತಾಲ, ದೇಸಾಯಿ ಇತ್ಯಾದಿ. ಸಾಹಿತ್ಯ ಪ್ರಕಾರ ಭಿನ್ನವಾದಾಗ, ಲೇಖಕರ ಶೈಲಿ ಬೇರೆಯಾಗುವುದು ಸಹಜ. ಕಾದಂಬರಿಕಾರ ಕುವೆಂಪು ಮತ್ತು ಕವಿ ಕುವೆಂಪು ಒಂದೇ ಅಲ್ಲ. ಆ ಎರಡು ವ್ಯಕ್ತಿತ್ವಗಳೂ ಭಿನ್ನ. ಅಂತೆಯೇ ಹಾಸ್ಯಬರಹಗಳ ರಾಶಿ, ಮನೋನಂದನ, ಮನೋ ಮಂಥನಗಳ ರಾಶಿ ಇಬ್ಬರೂ ಬೇರೆ ಬೇರೆ. ವಾಚಕರಿಗೆ ಈ ಎರಡೂ ಬಗೆಯ ಪುಸ್ತಕ ಗಳನ್ನು ಕೊಟ್ಟರೆ, ಅವುಗಳನ್ನು ಬರೆದವರೇ ಇವನ್ನೂ ಬರೆದವರು ಎಂದು ಖಂಡಿತ ಗುರುತಿಸಲಾರರು. ಅದೇ ರೀತಿ ಲೇಖಕನ ಮನೋಧರ್ಮ ಒಂದೇ ರೀತಿ ಇರುತ್ತ ದೆಂದು ಹೇಳಲಾಗುವುದಿಲ್ಲ. ವಂಶವೃಕ್ಷ, ನಾಯಿನೆರಳುಗಳ ಭೈರಪ್ಪ ಮತ್ತು ಪರ್ವ, ಸಾಕ್ಷಿಗಳ ಭೈರಪ್ಪ ಒಂದೇ ಅಲ್ಲ.

'ರತ್ನನ ಪದಗಳು' ಕಾವ್ಯವಾದರೆ, ಅವರ ಉಳಿದ ಬರವಣಿಗೆಗಳು ಗದ್ಯ. ಅವುಗಳೊಂದಿಗೆ ಇದನ್ನು ಹೋಲಿಸಿ, ಅವುಗಳ ಲೇಖಕನ ವ್ಯಕ್ತಿತ್ವ ಇವರಿಂದ ಬೇರೆ ಇದ್ದುದರಿಂದ ರತ್ನನ ಪದಗಳ ಕರ್ತೃ ಇವರಲ್ಲ ಎಂದು ತೀರ್ಮಾನಕ್ಕೆ ಬರುವುದೇ ಸರಿಯಲ್ಲ.

ಮತ್ತು "ರತ್ನನ ಪದಗಳ ಹೊರತಾಗಿ ರಾಜರತ್ನಂ ಕೃತಿಗಳಿಂದ ವ್ಯಕ್ತವಾಗುವ ರಾಜರತ್ನಂ ವ್ಯಕ್ತಿತ್ವವೇ ರಾಜರತ್ನಂ" ಎಂದು ಕಂಠೋಕ್ತವಾಗಿ ಹೇಳಲು ಆಧಾರವಿಲ್ಲ.

ಕೈಲಾಸಂ ಹೇಳಿ ಬರೆಯಿಸುವ ಅಭ್ಯಾಸವಿದ್ದವರು. ರಾಜರತ್ನಂ ಕೈಲಾಸಂ ಬಳಿಗೆ ಹೋದಾಗ ಮಾತ್ರ ಈ ಪದಗಳನ್ನು ಹೇಳುತ್ತಿದ್ದರು, ಬೇರೆ ಯಾರಿಗೂ ಹೇಳುತ್ತಿರಲಿಲ್ಲ ಎಂದು ಅರ್ಥವೆ ? "ನಂ ನಂ ಮಾತು" ಎಂಬುದನ್ನು ಇಂಗ್ಲಿಷಿನಿಂದ ಅನಾಮತ್ತಾಗಿ ಅನುವಾದಿಸಿಕೊಂಡಿದ್ದೆಂದು ಅವರೇ ಹೇಳಿದ್ದಾರೆ. ಆದರೆ "ಎಂಡಪ್ ತ್ರೊಂದ್ರೆ" ಮಾತ್ರ ಹಾಗಲ್ಲ. ಇಂಗ್ಲಿಷಿನಿಂದ ಎತ್ತಿ ಕೊಂಡಂತಿದೆಯೇ ಹೊರತು, ಹಾಗೆ ಎತ್ತಿಕೊಂಡ ನೆನಪಿಲ್ಲ ಎಂದು ಹೇಳಿದ್ದಾರೆ. ಒಂದು ವೇಳೆ ಅದನ್ನೋದಿದ್ದರೂ ಮರೆತಿದ್ದ ಆ ಹಳೆಯ ನೆನಪು, ಕುಡುಕನೊಬ್ಬನ ಚರ್ಯೆಗಳನ್ನು ನೋಡಿದಾಗ ಕೆರಳಿ, ಈ ಪದ್ಯ ರಚನೆಗೆ ಕಾರಣವಾಗಿರಬಹುದು ಎಂದಿದ್ದಾರೆ. ಇಂಥದು ಸಾಹಿತ್ಯ ಜಗತ್ತಿನಲ್ಲಿ ಸರ್ವೇಸಾಮಾನ್ಯ. ಭಾಷೆಯ ವಿಷಯ ಕೂಡ ಹಾಗೆಯೇ. ಪಡಖಾನೆ ಯಲ್ಲಿ ತಾವು ನೋಡಿದ ಕುಡುಕನೊಬ್ಬನ ಭಾಷೆ ಎಂದು ಹೇಳಿದ್ದರೂ, ವಾಸ್ತವವಾಗಿ ಇಲ್ಲಿಯ ಪದಗಳು ಕುಡುಕನೊಬ್ಬನ ಆಡುನುಡಿ ಎನಿಸುವಂಥ ಭಾಷೆಯೊಂದನ್ನು ಕೈಲಾಸಂ ಅವರ ನಾಟಕಗಳ ಪ್ರಭಾವದಿಂದ ರಾಜರತ್ನಂ ಸೃಷ್ಟಿಸಿಕೊಂಡರೆಂದು ಹೇಳ ಬೇಕು. ಕಾರಣ ಇದು ಕುಡುಕನ ಭಾಷೆಯನ್ನು ತದ್ವತ್ತಾಗಿ ಅನುಕರಿಸಿದೆ ಎನ್ನು ವಂತಿಲ್ಲ.[1] ಈ ರೀತಿ ಅನ್ಯರಿಂದ ಪ್ರಭಾವ, ಪ್ರೇರಣೆ ಪಡೆದು, ಕೆಲವೊಮ್ಮೆ ಅದೇ ಉಕ್ತಿಗಳನ್ನು ಸ್ವೀಕರಿಸಿಯೂ ಅದಕ್ಕೆ ಹೊಸದೊಂದು ಮೆರುಗನ್ನು ತನ್ನ ಪ್ರತಿಭಾ ವ್ಯಾಪಾರದಿಂದ ಅಳವಡಿಸುವುದು ಕೃತಿಚೌರ್ಯ ಅಥವಾ ಹರಣವೆನ್ನಿಸುವುದಿಲ್ಲ. ಅದು ಸ್ವೀಕರಣವೆನಿಸುತ್ತದೆ. ಅದನ್ನು ಮಾಡದ ಕವಿಯೇ ಇಲ್ಲ.[2] ಇಂಥದನ್ನೆಲ್ಲ ಕೃತಿ ಚೌರ್ಯವೆಂದು ಹೇಳುತ್ತಾ ಹೋದರೆ ನಮ್ಮ ಎಲ್ಲ ಕವಿಗಳೂ—ರನ್ನ, ಪಂಪ, ಕುವೆಂಪು ಬೇಂದ್ರೆ, ಅಡಿಗ-ಎಂದಲ್ಲ ಒಂದು ಅರ್ಥದಲ್ಲಿ ಕೃತಿಚೋರರೇ !

ಉದ್ಧೃತ ವಾಕ್ಯಗಳನ್ನು ಕೊಡುವಾಗ ಹಿಂದು ಮುಂದಿನ ಸಂದರ್ಭ ತಿಳಿಸದೆ ಇದ್ದರೆ ಅಪಾರ್ಥಗಳಿಗೆ ಎಡೆಕೊಟ್ಟಂತಾಗುತ್ತದೆ. ಉದಾಹರಣೆಗೆ–"ಅಂತೂ ರಾಮ ರಾಯರಿಗೆ ನನ್ನ ಮೇಲೆ ಕೃಪೆ ಬಂತು. ನನ್ನಲ್ಲಿ ನಂಬಿಕೆ ಬಂತು-" ಎಂಬ ವಾಕ್ಯ ಯಾವ ಸಂದರ್ಭದಲ್ಲಿ ಹೇಳಿದ್ದೆಂದು ತಿಳಿಸಿಲ್ಲ.

---

1. ಈ ವಿಷಯದ ಸಮರ್ಪಕ ವಿವೇಚನೆಗೆ ನೋಡಿ–ವಿಶ್ಲೇಷಣೆ–ಪುಟಗಳು: 87-90 ಎಚ್. ಎಸ್. ರಾಘವೇಂದ್ರರಾವ್

2. ನೋಡಿ. ಭಾರತೀಯ ಕಾವ್ಯ ಮೀಮಾಂಸೆ—ಪುಟ, 198-200-ತೀ ನಂ ಶ್ರೀ

ಇನ್ನು ಪದ್ಯ ಖಂಡಗಳೆರಡನ್ನು ಕೊಟ್ಟು-"ಇವನ್ನು ಯಾರು ಯಾರಿಗೆ ಹೇಳಿರಬಹುದೆಂದು ಪ್ರಜ್ಞಾವಂತ ಕನ್ನಡಿಗರು ಯೋಚಿಸಬೇಕು" ಎಂದು ಹೇಳಿರುವುದು ಕೂಡ ಕುಚೋದ್ಯದಾಗಿದೆ. ಕಾರಣ ಇದರ ಬಗ್ಗೆ ರಾಜರತ್ನಂ ಅವರೇ "ಹತ್ತು ವರುಷ"ದಲ್ಲಿ ಪ್ರಸ್ತಾಪಿಸಿದ್ದಾರೆ. (ಪುಟ 93-94) ಅದರ ಅರಿವು ಅವರಿಗೆ ಇದ್ದೇ ಈ ಕವನ ರತ್ನನ ಪದಗಳಲ್ಲಿ ಸೇರ್ಪಡೆಯಾಗಿದೆ. ಹಾಗೆ ಮಾಡಲು ಕಾರಣ ಅದರಲ್ಲಿ ಯಾವಅಪಾರ್ಥ ಕಲ್ಪನೆಯು,ಅಥವಾ ದೂರಾರ್ಥ ಕಲ್ಪನೆಯುಭಯು ಅವರಿಗೆ ಇರಲಿಲ್ಲ.

ಅತ್ಯಂತ ವಿಷಾದದ ಸಂಗತಿಯೆಂದರೆ, ಸಾಹಿತ್ಯೇತರವಾದ ವಿಚಾರಗಳ ಬೆಂಬಲದಿಂದ ತಮ್ಮ ವಾದಕ್ಕೆ ಸಮರ್ಥನೆ ದೊರಕಿಸಲು ಪ್ರಯತ್ನ ನಡೆಸಿರುವುದು. ರತ್ನನ ಪದಗಳು ಕೃತಿಚೌರ್ಯವಲ್ಲವೆಂದು ಹೇಳುವವರು ಪುರೋಹಿತ ಶಾಹಿ ವರ್ಗದವರು. ಇವರಿಗೆ ತಮ್ಮ ಗುಂಪಿಗೆ ಸೇರಿದ ರಾಜರತ್ನಂ ಅವರನ್ನು ಸಮರ್ಥನೆ ಮಾಡುವ ಪಟ್ಟಭದ್ರ ಹಿತಾಸಕ್ತಿ ಇದೆ ಎಂದು ಹೇಳಿ. ಈ ವರ್ಗದವರು ಲೇಖನವನ್ನು ನೋಡಲೂ ಸಿದ್ಧರಿಲ್ಲದ್ದಕ್ಕೆ ಕಾರಣ ತಾವು ದಲಿತ-ಬಂಡಾಯ ಪಂಥಕ್ಕೆ ಸೇರಿದವರಾಗಿರುವುದು ಎಂದು ಆಪಾದಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪಟ್ಟಭದ್ರರು, ಪುರೋಹಿತ ಶಾಹಿಗಳು, ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗಿರುವುದು ಕನ್ನಡಿಗರಿಗೆ ಸಂಶೋಧನೆಯ ಬಗೆಗಿರುವ ಬಾಲಿಶ ನಂಬಿಕೆಯಿಂದಾಗಿ.

ಇಂಥ ಹೇಳಿಕೆ ಹತಾಶ ವ್ಯಕ್ತಿಯ ಕೊನೆಯ ಅಸ್ತ್ರವೆಂಬಂತಿದೆ. ಇವೆಲ್ಲ ಕೇವಲ ಪ್ರಚೋದನಕಾರಿಯಾದ. ಅಗ್ಗದ. ಪ್ರತಿಕ್ರಿಯೆಗೂ ಯೋಗ್ಯವಲ್ಲದ ಮಾತುಗಳು, ಕನ್ನಡದಲ್ಲಿ ಸದ್ಯಕ್ಕೆ ಇನ್ನೂ ಇಂಥ ಕೆಟ್ಟ ಪರಿಸ್ಥಿತಿ ಇಲ್ಲ. ಇದೆಲ್ಲ ಇವರ ಮನೋವೈಕಲ್ಯ ಅಷ್ಟೆ. ತಮ್ಮಲ್ಲಿರುವ ಈ ವಿಕೃತಿಯನ್ನು ಎಲ್ಲೆಡೆಯೂ ಇದೆಯೆಂದು ಘೋಷಿಸುವ ಮನೋವೃತ್ತಿ ಅಷ್ಟೆ. ತಮ್ಮ ವಾದಕ್ಕೆ ಪಂಥದ ಬೆಂಬಲ ಪಡೆವ ಹುನ್ನಾರು. ಆದರೆ ಇಂಥ ಸಾಹಿತ್ಯಿಕವಾದ ವಿವಾದಗಳು, ಸಾಹಿತ್ಯಿಕ ಚರ್ಚೆಯಿಂದ ತೀರ್ಮಾನವಾಗಬೇಕೇ ಹೊರತು, ಪಂಥದ ಇಲ್ಲವೆ ಗುಂಪಿನ ಬಹುಮತದ ಬೆಂಬಲದಿಂದಲ್ಲ. ಇಂಥ ಆವೇಶ ಪೂರ್ಣವಾದ ಪೂರ್ವಾಗ್ರಹದ ಮಾತುಗಳಿಗೆ ಎಷ್ಟು ಬೆಲೆ ಕೊಡಬೇಕೆಂಬುದು ಪ್ರಜ್ಞಾವಂತರಾದ ಕನ್ನಡಿಗರಿಗೆ ಸೇರಿದ್ದು.

ಮೇಲಿನ ಸುದೀರ್ಘ ಚರ್ಚೆಯಿಂದ ಹೇಳಬಹುದಾದ್ದಿಷ್ಟೆ : "ರತ್ನನ ಪದಗಳು" ರಾಜರತ್ನಂ ಪ್ರಕಟಿಸಿಕೊಂಡುಬಿಟ್ಟಿದ್ದಾರೆಂಬ ಶ್ರೀಮತಿ ಪೂರ್ಣಿಮಾ ಅವರ ವಾದ ಮರಳಿನಲ್ಲಿ ಎಣ್ಣೆ ತೆಗೆಯುವ ಸಾಹಸವಾಗಿದೆಯೇ ಹೊರತು ವಾಸ್ತವವಲ್ಲ. ಹೆಚ್ಚೆಂದರೆ ನಾವು ಹೇಳಬಹುದಾದದ್ದು, ಕೈಲಾಸಂ ಅವರ ಹಾಡುಗಳ ಭಾಷೆ ಹಾಗೂ ಡಿ.ವಿ.ಜಿ.ಯವರ ಉಮರನ ಒಸಗೆಯ ಪದ್ಯಗಳಿಂದ ಪ್ರೇರಣೆ ಮತ್ತು ಪ್ರಭಾವಗಳನ್ನು ಹೊಂದಿರಬಹುದು ಎಂದು ಮಾತ್ರ. ಉತ್ತಮ ಸಾಹಿತ್ಯ ನಲುಗಿಸುವ ವ್ಯಕ್ತಿಗಳ ಸಂಖ್ಯೆಯನ್ನು ಹೆಚ್ಚಿಸುವವರಲ್ಲಿ ಶ್ರೀಮತಿ ಪೂರ್ಣಿಮಾ ಅವರು ಸೇರದಿರಲೆಂದು ನಾವು ಹಾರೈಸೋಣ. *

# ಪ್ರಬುದ್ಧ ಕಾಳಜಿಯ ನಜೀರರ 'ಕಾತರ'

—ಬಸವರಾಜ ವಕ್ಕುಂದ

ಈ ಸಂಕಲನದಲ್ಲಿ ೩೨ ಕವನಗಳು, ೮-೧೦ ಹನಿಗವನಗಳು ಸೇರಿವೆ. ೩೨ ಕವಿತೆಗಳಲ್ಲಿ ೮-೧೦ ಗಝಲ್ ಎಂದು ಬರೆಯಿಸಿಕೊಂಡ ರಚನೆಗಳಿವೆ. ಇದು ಈ ಸಂಕಲನದ ವಿಶಿಷ್ಟತೆ. ಇಲ್ಲಿನ ಹೆಚ್ಚಿನ ರಚನೆಗಳಲ್ಲಿ ಆ ಗಝಲ್ ಗುಣವೇ ಪ್ರಧಾನವಾಗಿರುವುದರಿಂದ ಇದನ್ನು ಕವಿಯ ವಿಶಿಷ್ಟತೆ ಎನ್ನಲೂಬಹುದು. ನೋವು ಹತಾಶೆಗಳನ್ನು ತೋಡಿಕೊಳ್ಳುವಾಗ ಅಗತ್ಯವಾದ ತಿಳಿಯಾದ ಭಾಷೆ. ಭಾವಗಳನ್ನು ಸೂಕ್ಷ್ಮವಾಗಿ ಇದರಲ್ಲಿ ಮೀಟುವ ಮಿಡಿಯುವ ಧ್ವನಿಪೂರ್ಣತೆ ಕಾಣಬಹುದು. ಸಾಮಾನ್ಯವಾಗಿ ಗಝಲ್ ಗುಣಗಳಿನ ಬಹುತೇಕ ಕವಿತೆಗಳಲ್ಲಿ ನೋವು ಸ್ಥಾಯಿಯಾಗಿದ್ದು ಇತರ ಪರಿಕರಗಳು ಹದವಾಗಿ ಮೇಳೈಸಿವೆ. ಪ್ರೀತಿ-ಪ್ರೇಮದ ಭಾವಗಳು ಮೊದಲ ಸಂಕಲನದಲ್ಲಿ ಇರಬಹುದಾದಷ್ಟು ಇಲ್ಲವಾದರೂ ಕೆಲವು ಕವಿತೆಗಳಲ್ಲಿ ಮತ್ತು ಹನಿಗವನಗಳಲ್ಲಿ ಪರಿಣಾಮಕಾರಿಯಾಗಿ ಕಾಣಿಸಿಕೊಂಡಿವೆ.

ಇಲ್ಲಿನ ನೋವು ವೈಯಕ್ತಿಕ ನೆಲೆಯಲ್ಲಿ ಮಾತ್ರ ಪರ್ಯವಸಾನಗೊಳ್ಳದೆ ಸಮಾಜಿಕದೆಡೆಗೆ ಕಾತರಿಸುದರಿಂದ 'ಕಾತರ'ಕ್ಕೆ ವಿಶೇಷ ಮಹತ್ವ ಬಂದಿದೆ. ಬಂಡಾಯದ ತುಡಿತಗಳು ಅಬ್ಬರಗಳಾಗದೆ ಭಾವಗಳಲ್ಲಿಯೇ ಕರಗಿಬರುವುದು ಕನ್ನಡ ಸಾಹಿತ್ಯ ಇಂದು ಪಡಕೊಳ್ಳುತ್ತಿರುವ ತಿರುವಿನ ಅರಿವು ಕವಿಗೆ ಇರುವುದರ ಕುರುಹು. ಇಲ್ಲಿ ಅನೇಕ ಉತ್ತಮ ಕವಿತೆಯ ಸಾಲುಗಳನ್ನು ಉದಾಹರಿಸಬಹುದು :

ಈ ಊರಲ್ಲಿ ಏನು ಹುಡುಕಲಿ

ಏನು ಭರವಸೆ ಸಿಗದು ಬೂದಿಯ ವಿನಾ (ನಿನ್ನವಿನಾ)-ಇಂತಹ ಹತಾಸೆಯ ಆಳದಲ್ಲಿಯೂ ಆಶಾವಾದದ ಒರತೆ ಸೆಲೆಯೊಡಿಯುತ್ತದೆ :

ಕನಸಿನ ಅರಮನೆ ಹುಡುಕಬೇಕು

ಕಣ್ಣಿನ ಹೊಳಪಿನಲಿ ಗುಡಿಸಲು ಬೆಳಗಬೇಕು (ಕಾಣಬೇಕು)ಎಂದು ಮಿಡಿಯುವ ಕವಿ,

ಖಾಲಿ ಹೊಟ್ಟೆಗಿಲ್ಲದ ಖಯಾಲಿ
ಹಾಲಿ ಬದುಕಿಗೆ ಅದೇ ರಾಗದ ಖವ್ವಾಲಿಯಾಗುವದನ್ನು.

ದೈನಂದಿನ ಬಾಳಿಗೆ

ಭಾವಗಳೆಲ್ಲ ಹರಾಜಿಗೆ ಬೀಳುವದನ್ನು "ಯಾತ್ರೆ"ಯಲ್ಲಿ ಕಾಣಿದ್ದಾನೆ. ಇದು ಸಾಮಾಜಿಕ ದುರಂತವಷ್ಟೇ ಅಲ್ಲ ಸೃಜನ ಕ್ರಿಯೆಯ ದುರಂತವೂ ಹೌದೆಂಬುದು ಇಂಥಲ್ಲಿ ಮಾರ್ಮಿಕವಾಗಿ ವ್ಯಕ್ತವಾಗಿದೆ.

ಸೃಜನ ಕ್ರಿಯೆಯನ್ನೇ ವಸ್ತುವಾಗುಳ್ಳ ಅನೇಕ ರಚನೆಗಳೂ. ಸಾಲುಗಳೂ ಇಲ್ಲಿವೆ. ಕುದಿವ ಮನಸ್ಸು ತನ್ನ ಕುಲುಮೆಯಲ್ಲಿರುವ ಕುಡಗಳನ್ನು ನೋಡಿಕೊಳ್ಳುವದು ಕಾವ್ಯ ಕರ್ಮದ ಪ್ರಾಮಾಣಿಕತೆಯ ದೃಷ್ಟಿಯಿಂದ ಒಳ್ಳೆಯದು.

ಉರಿಯುವ ನಂಪದ ಛಾಯೆಗಳಾಗಿ ಮೌನದಲಿ ಸಂಪಾದಿಸುವ ಗುರುತಾಗಿ
**ಶಬ್ದಗಳೇ—ಭಾವನೆಗಳಲಿ ಸಾಲುಕಟ್ಟಿ ಕವನಗಳಾಗಿ (ಕವಿ-ಕವನ-ಕನವರಿಕೆ)**

ಎಂಬ ಆಶಯ ನಾನು ನನ್ನೊಳಗೆ. ಕವಿ-ದ ಕವಿ–ತೆ. ಕಲಾಕಾರನೇ... ಕಾತರ, ಯುವ ಕವನ, ಮೊದಲ ಮಳೆ ಮುಂತಾದ ಕವನಗಳಲ್ಲಿ ಕಾಣಿಸಿಕೊಂಡಿವೆ.

ಕನ್ನಡಿ ಎದುರು ನಾನೆ ಜಿಂಬ ಯುವ ಕವನವ್ದಾಗಿತ್ತು (ಯುವ ಕವನ) ಎಂದು ಕವಿಯೇ ಹೇಳಿಕೊಂಡಿರುವದು ಸಂಕಲನದ ಒಟ್ಟಾರೆ ಮಿತಿಯೂ ಹೌದು. ನೆರಳಿನ ತರಹ, ಇಂದು, ಮೊದಲ ಮಳೆ, ಸ್ವಗತ ಸಂವಾದ. ಎಲ್ಲಿಯತನಕ. ಹೆಜ್ಜೆ ಮೂಡದ ಹಾದಿಯಲಿ ಮೊದಲಾದ ಹಲವು ಕವನಗಳು ಈ ಮಿತಿಯನ್ನು ಮೀರುವ ದಾರಿಯಲ್ಲಿವೆ. ಪ್ರಬುದ್ಧ ಕಾಳಜಿಗಳನ್ನುಳ್ಳ ಈ ಕವಿ ಭಾವಗಳೊಂದಿಗೆ ನಡೆಸುವಷ್ಟು ಗುದುಮುರಿಗೆಯನ್ನು ಭಾಷೆಯೊಂದಿಗೂ ನಡೆಸಿದರೆ ನಜೀರರ ಬಗೆಗಿನ ಭರವಸೆ ಹುಸಿಯಾಗಲಿಕ್ಕಿಲ್ಲ.

(ಕಾತರ (ಕವನ ಸಂಕಲನ) : ನಜೀರ್ ಚಂದಾವರ, ಸಮೀರ ಪ್ರಕಾಶನ, ಶಿರಸಿ 1989)

---

# ಉಳಿದದ್ದು

---

ನನ್ನ ನಾಳೆಗಳಲ್ಲಿ, ನಾನು ಇಲ್ಲೇ ಬಂದು
ಹುಡುಗು ಮನಸ್ಸು ತುಡುಗು ಪ್ರಾಯ
ಬೆಡಗು ಬದುಕನ್ನು 'ಉಫ್' ಎಂದು ಊದಿಬಿಟ್ಟ
ಹಳಸಲು ನಾತ ಇದೆ.
ತೊಟ್ಟಿಲು ಜೀಕಂಗಳೊಂದಿಗೇ
ಎಳೆದಂಬಿಟ್ಟ ಹಾಡುಗಳೊಂದಿಗೇ
ಮುಗಿಯದೇ ಹೋದ ಹಾಡ ಬಿಕ್ಕುವ ಸ್ವರಗಳಿವೆ.
ಇಟ್ಟ ಹೆಜ್ಜೆ, ಕೊಟ್ಟ ಮಾತುಗಳಲ್ಲಿ
ತೊಟ್ಟಿಕ್ಕದ ನೋವು ಒಳಗೊಳಗೇ ಕುದಿದು
ಹೊರ ಬರಂವ ಆವಿ ಇದೆ.
ಕಂಡ ಕಂಡವರೆದೆಗೆ 'ದುಡುಂ'ನೆ ಜಿಗಿದು
ತಳ ಶೋಧಿಸಿ, ಏನೂ ಸಿಗದೆ ಒಪ್ಪೆಯಲ್ಲೇ ಎದ್ದು ಬಂದು
ಕನಸೊಟ್ಟಿ ಕೂವಲಾರಿಸಿಕೊಳ್ಳುವ ನಾನಿದ್ದೇನೆ.

—ಸುಧಾಶರ್ಮಾ ಚವತಿ

# ಸಾಹಿತ್ಯ ಲೋಕದ ಜ್ವಾಲಾಮುಖಿ ಕಟ್ಟೀಮನಿ

"ಆತ್ಮ ಕಥೆಯೆಂದರೆ ಜೀವನ ಚರಿತ್ರೆಯಲ್ಲ"

"ತನಗೆ ಸತ್ಯವೆಂದು ಅನಿಸಿದುದನ್ನು ಯಾವ ಹೆದರಿಕೆಯೂ ಇಲ್ಲದೆ ಹೇಳುವವನೇ ಕ್ರಾಂತಿಕಾರಿ"

—ಬಸವರಾಜ ಕಟ್ಟೀಮನಿ (ಕಾದಂಬರಿಕಾರನ ಕಥೆಯಲ್ಲಿ)

ಜೀವನ ಚರಿತ್ರೆಯಲ್ಲದ ಆತ್ಮಕಥೆ ಬರೆದು ತಮ್ಮ ಬಡತನ, ಬದುಕಿಗಾಗಿ ಹೋರಾಟ, ಬಂಡಾಯಗಳನ್ನು "ಕಾದಂಬರಿಕಾರನ ಕಥೆ"ಯಲ್ಲಿ ದಾಖಲಾಗಿಸಿ ಕಣ್ಮರೆಯಾದ ಬಸವರಾಜ ಕಟ್ಟೀಮನಿ (70) ಕನ್ನಡ ಸಾಹಿತ್ಯ ಲೋಕದ ಜ್ವಾಲಾಮುಖಿ. ಪ್ರಗತಿಶೀಲ ಸಾಹಿತ್ಯದ ಕೊನೆಯ ಕೊಂಡಿಯೊಂದರ ಹಿಂದಿನ ಕೊಂಡಿ ಇವರು. (ಪ್ರಗತಿಶೀಲ ಚಳವಳಿಯ ಸ್ಥಾಪಕರಲ್ಲೊಬ್ಬರಾಗಿ ಅ ನ ಕೃ ನಂತರ ಕಣ್ಮರೆಯಾದ ಪ್ರಮುಖ ಸಾಹಿತಿ. ಅ ನ ಕೃ, ಕಟ್ಟೀಮನಿ, ನಿರಂಜನ ಈ ಚಳವಳಿಯ ಹುಟ್ಟಿಗೆ ಕಾರಣರಾದ ಕೊಂಡಿಗಳು)

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕನ್ನಡ :ಸಾಹಿತ್ಯದ ಏರಿಳಿತಗಳನ್ನು ಗುರ್ತಿಸುವಲ್ಲಿ ಹಲವು ಹಿರಿಯ ಸಾಹಿತಿಗಳು ನಮ್ಮೆದುರು ನಿಲ್ಲುವಾಗ ಕಟ್ಟೀಮನಿ ಅವರ ಬದುಕು–ಬರಹ ಸಾಧನೆಗಳ ಮಹತ್ವವನ್ನು ಮರೆಯಲು ಸಾಧ್ಯವೇ ಇಲ್ಲ. ಸಣ್ಣ ಕತೆಗಳ ಕೃಷಿ ಸಾಕಷ್ಟು ಮಾಡಿದ್ದರೂ 'ಕಾದಂಬರಿಕಾರ'ರೆಂದೇ ಹೆಸರಾಗಿದ್ದ ಕಟ್ಟೀಮನಿ ಈಗ ಕುಂದಿ ಹೋದ ಚೇತನ. ತಾವು ಬಿಟ್ಟು ಹೋದ ಸಾಹಿತ್ಯ ಮಾತ್ರ ಕುಂದದ ಚೇತನವಾಗಿ ಹೋರಾಟದ ಹಾದಿಗೆ ಅದರಲ್ಲೂ ಯುವ ಪೀಳಿಗೆಗೆ ಚೈತನ್ಯ ನೀಡುವಂಥಾದ್ದು.

"ವಸ್ತು ಏನೇ ಇರಲಿ ಅದನ್ನು ಕತೆಯಾಗಿಸುವಲ್ಲಿನ ಕಲೆಗಾರಿಕೆ ಮತ್ತು ಶೈಲಿ ಎಲ್ಲಾ ಬರಹಗಾರರಿಗೂ ಸಿದ್ಧಿಸಲಾರದು. ತಂತ್ರ, ಶೈಲಿ, ಪ್ರತಿಮೆಗಳನ್ನು ಕತೆಗಳಲ್ಲಿ ತುರುಕುತ್ತ, ತಲೆ ಕೆಡಿಸಿಕೊಂಡವರಿಗೆ ಉತ್ತರವಾಗಿ ಇವರ ಬರಹ ನೇರ, ಸ್ಪಷ್ಟ, ಸುಲಲಿತ. ಸಾಮಾಜಿಕ, ಐತಿಹಾಸಿಕ ವಸ್ತುಗಳೆರಡನ್ನೂ ಅಷ್ಟೇ ಸಮರ್ಥವಾಗಿ ಚಿತ್ರಿಸುತ್ತ ಸಾಹಿತ್ಯ ಲೋಕದಲ್ಲಿ ಆಗಾಗ್ಗೆ ಚರ್ಚೆಗೊಳಗಾಗುತ್ತಿರುವ ಈ ಸಾಹಿತಿ ನಡೆದು ಬಂದ (ಹೋದ) ದಾರಿ ಕುತೂಹಲಕರವಾದದ್ದು. ಗ್ರಾಮೀಣ ಬದುಕಿನ ಅನಕ್ಷರತೆ, ಬಡತನ, ಶೋಷಣೆ ಬದುಕಿನ ಅನಿವಾರ್ಯತೆಗಾಗಿ ನಡೆಸುವ

ಹೋರಾಟಗಳನ್ನೊಳಗೊಂಡು ಮೇಲ್ಜಾತಿಗಳವರು ಮೆರೆಸುವ ಅಟ್ಟಹಾಸಗಳನ್ನು ಬರಹದಲ್ಲಿ ಮುಕ್ತವಾಗಿ ಸೆರೆ ಹಿಡಿದ ನಿಜವಾದ ಬಂಡಾಯಗಾರರು ಕಟ್ಟೀಮನಿ"*

ಬೆಳಗಾವಿ ಜಿಲ್ಲೆಯಲ್ಲಿ ಮಲಾಮರಡಿ ವಿಶಿಷ್ಟವಾದ ಹೆಸರು. ಈಚಿನ ವರ್ಷಗಳಲ್ಲಂತೂ ಕಟ್ಟೀಮನಿ ಅಂದರೆ ಮಲಾಮರಡಿಯೇ ಅನ್ನುವಂತಾಗಿತ್ತು. ಬದುಕಲಾರದ ಸ್ಥಿತಿಯಲ್ಲಿ ಊರು ಬಿಟ್ಟು ವಲಸೆ ಹೋದವರು 'ತೌರೂರು' ನೆನಪಾಗಿ ಮರಳಿ ಬಂದು ಗಾಢವಾಗಿ ಅಪ್ಪಿ ಪ್ರೀತಿಸುವಂತೆ ಈ ಸಾಹಿತಿ ಹತ್ತಾರು ಬಾರಿ ಗಂಟೂ ಮೂಟೆ ಕಟ್ಟಿಕೊಂಡು ಬೆಂಗಳೂರು–ದಾವಣಗೆರೆ–ಧಾರವಾಡ–ಮಲಾಮರಡಿ ಎಂದು ಅಲೆದು ಬದುಕಿನ ಹೋರಾಟಕ್ಕೆ ನಾಂದಿ–ಅಂತ್ಯ ; ಹಾಡಿ–'ಆಡಿದ' ಅಪರೂಪದ ಸಾಹಿತಿ.

ಮಾಡಿಮಡಿದವರು, ಜ್ವಾಲಾಮುಖಿಯ ಮೇಲೆ, ಜರತಾರಿ ಜಗದ್ಗುರು, ಜನಿವಾರ–ಶಿವದಾರ, ಹರಿಜನಾಯಣ, ಮುಂತಾದ ಶ್ರೇಷ್ಠ ಕಾದಂಬರಿಗಳನ್ನು ಬರೆದು ಹೆಸರಾದ ಕಟ್ಟೀಮನಿ, ಸಣ್ಣ ಕತೆಗಳ ಪ್ರಕಾರದಲ್ಲೂ ಪಳಗಿದವರು.

'ಮಾಡಿ ಮಡಿದವರು'—ಚಲನ ಚಿತ್ರವಾಗಿ (ಕೆ.ಎಂ.ಶಂಕರಪ್ಪ ನಿರ್ದೇಶನ) ಪ್ರಶಸ್ತಿ ಪಡೆದರೆ : 'ಜ್ವಾಲಾಮುಖಿಯ ಮೇಲೆ' ದಾವಣಗೆರೆ ಕಾರ್ಮಿಕರ ಹೋರಾಟದ ಹಿನ್ನೆಲೆಯಲ್ಲಿ ರಚಿಸಿದ ಕಾದಂಬರಿ ಸೋವಿಯತ್ ದೇಶ ನೆಹರೂ ಬಹುಮಾನ** ಪಡೆಯಿತು. ನಂತರ ಕಟ್ಟೀಮನಿ ಅವರು ರಷ್ಯಾಕ್ಕೂ ಹೋಗಿ ಬಂದು ಜೀವಿತದ ಕೊನೆವರೆಗೂ ಸೋವಿಯತ್ ಪ್ರಕಟಣಾ ಸಂಬಂಧ ಇಟ್ಟುಕೊಂಡಿದ್ದವರು.

ಕಾಲ ಕಾಲಕ್ಕೆ ಆದ ಸಾಹಿತ್ಯಕ ಬೆಳವಣಿಗೆಗಳಲ್ಲಿ ಕಟ್ಟೀಮನಿ ಅವರು ಬೆಳೆದು ಬಂದವರು. ಬದಲಾವಣೆಯನ್ನು ಗುರ್ತಿಸಿದವರು. ತಮ್ಮ ವಿಚಾರಗಳನ್ನು ನೇರ–ಪ್ರಾಮಾಣಿಕವಾಗಿ ಹೇಳಿ ಟೀಕೆಗೆ ಗುರಿಯಾದವರು.

ಅರವತ್ತು–ಎಪ್ಪತ್ತರ ದಶಕದಲ್ಲಿ ನವ್ಯ ಸಾಹಿತ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲ. ಈ ಸಾಹಿತ್ಯ ಪ್ರಕಾರವನ್ನು ಕಟ್ಟೀಮನಿ ವಿರೋಧಿಸಿದ್ದರು ಎಂಬುದಕ್ಕೆ ಕವಿ ಗೋಪಾಲಕೃಷ್ಣ ಅಡಿಗರೊಂದಿಗೆ ನಡೆಸಿದ ಪತ್ರ ವ್ಯವಹಾರಗಳು ಪುರಾವೆಗಳಾಗಿ

---

*'ದೃಷ್ಟಿ'–(ಸಾಹಿತ್ಯ ಅಂಕಣ, ಅಭಿಮಾನಿ ; ಏಪ್ರಿಲ್ ೬, ೧೯೮೬)ದಲ್ಲಿ 'ಕಾದಂಬರಿಕಾರನ ಕತೆ' ಲೇಖನದಲ್ಲಿ ನಾನು ಬರೆದ ಮಾತು.

**ಭಾರತ–ಸೋವಿಯತ್ ದೇಶಗಳ ಸ್ನೇಹವನ್ನು ದೃಢಪಡಿಸಲು ದುಡಿದ ದಿ॥ ಪ್ರಧಾನಿ ನೆಹರೂ ಸ್ಮಾರಕವಾಗಿ ಕೇವಲ ಸ್ನೇಹಾಕಾಂಕ್ಷೆಯಿಂದ ಸೋವಿಯತ್ ಬಾಂಧವರು ಆರಂಭಿಸಿದ ಈ ಯೋಜನೆಯನ್ನು ಪ್ರತಿವರ್ಷ ಭಾರತದ ಬೇರೆ ಬೇರೆ ಭಾಷೆಗಳ ಉತ್ತಮೋತ್ತಮ ಸಾಹಿತ್ಯ–ಕಲಾ ಪ್ರಕಾರಗಳ ಕೃತಿ ಆಯ್ದು ಹಣ–ಪಾರಿತೋಷಕ ಕೊಟ್ಟು 15 ದಿನ ಸೋವಿಯತ್ ದೇಶಕ್ಕೆ ಪ್ರವಾಸ ಕಳುಹಿಸುವ ವ್ಯವಸ್ಥೆಯಿದು.

'ಕಾದಂಬರಿಕಾರನ ಕತೆ'ಯಲ್ಲಿ ಸಿಕ್ಕುತ್ತವೆ. ಅಡಿಗರ ದೀರ್ಘ ಪತ್ರಗಳಲ್ಲಿ ಆವೇಶದ ಮಾತುಗಳು ದಾಖಲೆಯಾಗಿವೆ. (ಆದರೆ ಕಟ್ಟೀಮನಿ ಅವರು ಅಡಿಗರಿಗೆ ಯಾವ ಪ್ರಶ್ನೆ ಎತ್ತಿದ್ದರು ಅನ್ನುವ ವಿಚಾರ ಈ ಕೃತಿಯಲ್ಲಿಲ್ಲ) ನವ್ಯದ ಹೊಸ ಅಲೆಗೆ ದನಿ ಗೂಡಿಸಿದ ರಾಮಚಂದ್ರಶರ್ಮರ ಪ್ರಸ್ತಾಪವೂ ಸಾಕಷ್ಟು ಬರುತ್ತದೆ. 'ನವ್ಯ ಕಾವ್ಯ ಹತ್ತಾರು ಬಾರಿ ಓದಿದರೂ ತಲೆ ಬುಡ ಅರ್ಥ ಆಗಲಿಲ್ಲ' ಎಂಬ ಕಟ್ಟೀಮನಿ ಅವರ ಪ್ರಾಮಾಣಿಕ ಅನಿಸಿಕೆಯೇ ಅಡಿಗರಂಥವರಿಗೆ ಕೋಪ ಬರಲು ಕಾರಣ ಇದ್ದಿರಬಹುದು.

ಅ ನ ಕೃ, ತ ರಾ ಸು, ಆನಂದ ಅವರುಗಳ ಬಗ್ಗೆಯೂ ಮುಕ್ತ ವಿಚಾರಗಳನ್ನು ಹಂಚಿಕೊಂಡಿದ್ದ ಕಟ್ಟೀಮನಿ ; ರಾಜಕೀಯ ವಿಚಾರದಲ್ಲಿ ಗೊಂದಲಿಗರಾಗಿದ್ದರು. ವಿಧಾನ ಪರಿಷತ್ ಸದಸ್ಯರಾಗಿ ನೇರವಾಗಿ ಚುಚ್ಚಿ ಮಾತನಾಡಿದರೂ ತುರ್ತು ಪರಿಸ್ಥಿತಿಯಲ್ಲಿ ಇಂದಿರಾಗಾಂಧಿಯನ್ನು ಹೊಗಳಿದ್ದು ; ಆಗಾಗ್ಗೆ ರಾಜಕೀಯದ ಬಗ್ಗೆ ತಾಳಿದ್ದ ನಿಲುವು, ಕೊಡುತ್ತಿದ್ದ 'ಹೇಳಿಕೆ' ಇವರ ದೌಬಲ್ಯವನ್ನು ಬೊಟ್ಟುಮಾಡಿ ತೋರಿಸುತ್ತಿತ್ತು.

"ಸಮಸ್ತ ಜೀವನವೇ ಬಸವರಾಜ ಕಟ್ಟೀಮನಿ ಅವರ ಸಾಹಿತ್ಯದ ಜೀವಾಳ. ಸೋಲರಿಯದ ಈ ಹೋರಾಟಗಾರನ ಸಾಹಿತ್ಯದ ಕೇಂದ್ರ ಬಿಂದುವೇ ಸಂಘರ್ಷ. ಹಳತು-ಹೊಸತು, ಜಾತಿ–ವರ್ಗ, ಪಟ್ಟಭದ್ರ ಹಿತಗಳು–ಶೋಷಿತರು, ದಾಸ್ಯ-ಸ್ವಾತಂತ್ರ್ಯದ ಆಕಾಂಕ್ಷೆ–ಮೊದಲ್ಗೊಂಡು ಹಲವಾರು ಸಂಘರ್ಷಗಳು ಮುಖಾಮುಖಿಯಾಗಲು ನೆಲೆಯೊದಗಿಸಿರುವ ಕಟ್ಟೀಮನಿಯವರ ಸಾಹಿತ್ಯ ವಿಪುಲವಾದುದ್ದು; ವೈವಿಧ್ಯಮಯವಾದದ್ದು. ದಲಿತರು, ಶೋಷಿತರ ಬದುಕು ಕಟ್ಟೀಮನಿಯವರ ಕೃತಿಗಳಲ್ಲಿ ಹಾಸು ಹೊಕ್ಕಾಗಿದೆ. ಲೇಖನಿಯನ್ನೇ ವೃತ್ತಿಯಾಗಿ, ಹೋರಾಟದ ಒಂದು ವ್ರತವಾಗಿ ಸ್ವೀಕರಿಸಿದ ಅವರ ಲೇಖನಿ ಕತ್ತಿಗಿಂತ ಹೆಚ್ಚು ಹರಿತ. ದೇವರು-ದಿಂಡಿರು ಧರ್ಮ, ನಂಬಿಕೆಗಳ ಹೆಸರಿನಲ್ಲಿ ಮುಗ್ಧ ಜನರನ್ನು ಶೋಷಿಸುವ ಶಕ್ತಿಗಳನ್ನು ಅವುಗಳ ನಿಜ ರೂಪದಲ್ಲಿ ಬಯಲು ಮಾಡುವ ನಿರ್ಭೀತ ಬರಹಗಾರ ಕಟ್ಟೀಮನಿ ಇಂಥವರ ಪಾಲಿಗೆ ಸಿಂಹ ಸ್ವಪ್ನವಾಗಿದ್ದರು... ......70ಕ್ಕೆ ಕಟ್ಟೀಮನಿ ತಮ್ಮ 'ಹೋರಾಟ' ಮುಗಿಸಿದ್ದಾರೆ. ಕನ್ನಡ ಕಥಾ ಸಾಹಿತ್ಯದಲ್ಲಿ ಕಟ್ಟೀಮನಿಯವರು ತಮ್ಮ ಹೆಜ್ಜೆ ಗುರುತುಗಳನ್ನು ಸ್ಪಷ್ಟವಾಗಿ ಮೂಡಿಸಿ ಹೆಜ್ಜೆ ಮೂಡದ ಹಾದಿ ಹಿಡಿದಿದ್ದಾರೆ."*

* * * *

**ಅಂತ್ಯದಲ್ಲಿ ಅನ್ವೇಷಣೆಯೊಂದಿಗೆ ಸಂಬಂಧ :**

ಹಿರಿಯ ಬರಹಗಾರರು ನಮ್ಮಂಥ ಹುಡುಗರ ಬಗ್ಗೆ ತಾತ್ಸಾರ ಹೊಂದಿರಬಹುದು ; ನಮ್ಮ ಬರಹ, ಪ್ರಕಟಣೆಗಳನ್ನು ಗಮನಿಸಲಾರರು ಇತ್ಯಾದಿ ಭಾವನೆ

---

*ನಿರ್ಭೀತ ಲೇಖಕನ ನಿರ್ಗಮನ 'ಪ್ರಜಾವಾಣಿ' (೨೪.೧೦.೮೯) ಸಂಪಾದಕೀಯ ಬರಹ

ಸಹಜವಾಗಿರುತ್ತದೆ. ಆದರೆ ಕಟ್ಟೀಮನಿ ಎಂದೂ ಇಂಥ ಧೋರಣೆ ತಾಳಿರಲಿಲ್ಲ ಎಂಬುದಕ್ಕೆ ನನ್ನ ವಾರಗೆಯ ಹಲವು ಮಿತ್ರರು ಹೇಳುತ್ತಿದ್ದ ವಿಚಾರಗಳೇ ಅವರ ಬಗ್ಗೆ ಗೌರವ ತಾಳುತ್ತಿದ್ದವು. ನನಗೂ ಈಚೆಗೆ ಅಂಥ ಅನುಭವ ಆಯಿತು.

'ಅನ್ವೇಷಣೆ'ಯ ಈಚಿನ ಸಂಚಿಕೆಯೊಂದನ್ನು ಮಲಾಮರಡಿಗೆ ಕಳುಹಿಸಿದ್ದೆ. ಒಂದು ವಾರದಲ್ಲೇ ಪತ್ರಿಕೆ ತಲುಪಿದ ಬಗ್ಗೆ, ಬರಹಗಳು ಪ್ರಿಯವಾದ ಬಗ್ಗೆ ಬರೆದು ಚಂದಾ ಹಣವನ್ನು ಸಧ್ಯದಲ್ಲೇ ಕಳುಹಿಸುವುದಾಗಿ ತಿಳಿಸಿದರು. ನಾನು ಅವರ ಪತ್ರಕ್ಕೆ ಉತ್ತರ ಕೊಡುವ ಮುನ್ನವೇ (೩–೪ ದಿನಗಳ ನಂತರ) ರೂ. 30/– ಎಂ.ಓ. ಬಂದೇಬಿಟ್ಟಿತು ! ಇಳಿ ವಯುಸ್ಸಿನಲ್ಲೂ ವೈಯಕ್ತಿಕ ಆಸಕ್ತಿಯಿಂದ ಪತ್ರಿಕೆಗೆ ತಾವೇ ಖುದ್ದು ಹಣ ಕಳುಹಿಸಿದ್ದು ನನಗೆ ಸಂತೋಷದ ಕಣ್ಣೀರು ಬರಿಸಿತು. ಈ ಹಣ ನನಗೆ "ಆಜೀವ ಚಂದಾ" ತೆಗೆದುಕೊಂಡಷ್ಟು ಖುಷಿಯಾಯಿತು. ಕೃತಜ್ಞತೆ ಹೇಳಿ ಪತ್ರ ಬರೆದು "ಬಂಡಾಯ 10 ವರ್ಷಗಳು" ಕುರಿತು ಪ್ರಶ್ನೆಗಳನ್ನು ಕಳುಹಿಸಿದೆ. ಬಹುಶಃ ಶೀಘ್ರವಾಗಿ ಉತ್ತರಿಸಿದವರಲ್ಲಿ ಕಟ್ಟಿಮನಿ ಅವರೇ ಪ್ರಥಮರು ! ಉತ್ತರ (ಇದೇ ಸಂಚಿಕೆಯ ಪುಟ 36-37 ನೋಡಿ) ಚುಟುಕಾಗಿದ್ದರೂ ಒಟ್ಟಿನಲ್ಲಿ ಹೇಳಬೇಕಾದ್ದನ್ನು ಟಿಪ್ಪಣಿಯಲ್ಲೇ ಹೇಳಿದ್ದು ನನಗೆ ಖುಷಿಕೊಟ್ಟಿತು. ಈ ಸಂಚಿಕೆಯು ಬರಹ ಅಚ್ಚಾಗಿ ಹೊರ ಬರುವ ಮುನ್ನವೇ ಕಟ್ಟೀಮನಿ ವಿಧಿವಶರಾದುದು ನನಗಂತೂ ತುಂಬಲಾರದ ನಷ್ಟ.

ಹಿಂದೊಮ್ಮೆ ರಾಯಚೂರಿನ ಕವಿ/ಕಾದಂಬರಿಕಾರ ಶಾಂತರಸ ಅವರನ್ನು ಅನ್ವೇಷಣೆಯಲ್ಲಿ ಸಂದರ್ಶನ ಮಾಡಿದಾಗ "**ಕಟ್ಟೀಮನಿ ಅವರ ಜ್ವಾಲಾಮುಖಿಯ ಮೇಲೆ ಕಾದಂಬರಿಗೆ ಜ್ಞಾನಪೀಠ ಪ್ರಶಸ್ತಿ ಬರಬೇಕು**" ಎಂದಿದ್ದರು. ಆದರೆ ಇಂಥ ದೊಡ್ಡ ಪ್ರಶಸ್ತಿಗೆ ಅರ್ಹವಾದ ಕೃತಿ ಇದೆಂದು ಹೇಳುವ "ಜನ" ಅಕಾಡೆಮಿಯಲ್ಲಿ ಇಲ್ಲದ್ದರಿಂದಲೋ ಏನೋ ಅದು ಇನ್ನೂ ಇದ್ದಲ್ಲೇ ಇದ್ದಿರಬಹುದು. (ಈ ಕೃತಿಗೆ ಈಗಾಗಲೇ ಸಲ್ಲಬೇಕಾದ ಗೌರವ ಸಂಧಿದೆಯೆಂದು ಸಮಾಧಾನಪಡಬಹುದೇನೊ.)

ಬಂಡಾಯಗಾರ ಕಟ್ಟೀಮನಿ ಅನ್ವೇಷಣೆ ಹೊರ ತರುತ್ತಿರುವ "ಬಂಡಾಯ 10 ವರ್ಷ" ಕುರಿತ ಪ್ರಶ್ನೋತ್ತರದ ವಿಶೇಷಕ್ಕೆ ಉತ್ತರಿಸಿ ಕಣ್ಮರೆಯಾದದ್ದು ಎಂಥಾ ವಿಪರ್ಯಾಸ ? ಸಾಹಿತ್ಯ–ಬದುಕಿನಲ್ಲಿ ನಿಜವಾದ ಬಂಡಾಯಗಾರರಾಗಿದ್ದ ಕಟ್ಟೀಮನಿಯವರನ್ನು ಬಂಡಾಯ ಸಾಹಿತ್ಯ ಸಂಘಟನೆ ದೂರವಿರಿಸಲು ಕಾರಣ ಏನಿರಬಹುದೆಂದು ಯೋಚಿಸುತ್ತಿದ್ದೇನೆ.

ದಿ. 26. 10. 1989 **—ಆರ್.ಜಿ. ಹಳ್ಳಿ ನಾಗರಾಜ್**

# ವಿಚಾರ ಸಾಹಿತ್ಯ ಕೃತಿಗಳು

ANVESHANE MAG (5) PBR-DECL 127/85-86

ಈ ಸಂಚಿಕೆಯಲ್ಲಿ:

ಬಂಡಾಯ ಸಾಹಿತ್ಯ ಹತ್ತು ವರ್ಷಗಳ ನೆನಪು — ಸಂಪಾದಕನ ಟಿಪ್ಪಣಿ

ಪೂರ್ಣಚಂದ್ರ ತೇಜಸ್ವಿಯೊಂದಿಗೆ (ಮುಖಾಮುಖಿ)—ನವೀನ ಕುಮಾರ್

ತೇಜಸ್ವಿ ಸಾಹಿತ್ಯ ಮತ್ತು ಕಲೆ—ಪ್ರೊ॥ ಎಂ.ಎಚ್.ಕೃಷ್ಣಯ್ಯ

ಕೆ.ಕೆ. ಹೆಬ್ಬಾರರ ಕಲೆ—ಹರಿಹರಪ್ರಿಯ

ಬಂಡಾಯ ಸಾಹಿತ್ಯ **10** ವರ್ಷ ಪ್ರಶ್ನೋತ್ತರ (ಮೊದಲ ಕಂತು):
ಶಿವರಾಮು ಕಾಡನಕುಪ್ಪೆ, ದಿ॥ ಬಸವರಾಜ ಕಟ್ಟೀಮನಿ, ಡಾ॥ ಆರ್ಕೆ,
ಜಿ. ರಾಜಶೇಖರ್–ಚದುರಂಗ, ಭಗವಾನ್.
ರತ್ನನ ಪದಗಳ ಕರ್ತೃ : ಪ್ರತಿಕ್ರಿಯೆ–ರಾ. ಲಕ್ಷ್ಮೀನಾರಾಯಣ
ಕುಂ.ವೀ, ಸುಧಾಶರ್ಮ ಚವತ್ತಿ, ಬಸವರಾಜ ವಕ್ಕುಂದ ಅವರ ಬರಹಗಳು.

---

ಮುಂದಿನ ಸಂಚಿಕೆಯಲ್ಲಿ :

ಬಂಡಾಯ 10 ವರ್ಷಗಳ 2ನೇ ಕಂತಿನ ಉತ್ತರ :
ಚಂದ್ರಶೇಖರ ಪಾಟೀಲ, ಡಾ॥ ಜಿ.ಎಸ್. ಶಿವರುದ್ರಪ್ಪ, ಡಾ॥ ಕಮಲಾ ಹಂಪನಾ,
ಆರ್. ವಿ. ಭಂಡಾರಿ, ಚಂದ್ರಶೇಖರ ನಂಗಲಿ, ಅಲ್ಲಮಪ್ರಭು ಬೆಟ್ಟದೂರ,
ಡಾ॥ ಕೆ. ವಿ. ನಾರಾಯಣ, ಡಾ॥ ಸಿದ್ಧಲಿಂಗಯ್ಯ, ಡಾ॥ ಪುರುಷೋತ್ತಮ ಬಿಳಿಮಲೆ,
ಎಚ್. ಎಸ್. ರಾಘವೇಂದ್ರರಾವ್, ಶೂದ್ರ ಶ್ರೀನಿವಾಸ್, ಡಾ॥ ರಹಮತ್ ತರೀಕೆರೆ.

ಹಾಗೂ ಸುಧಾಕರ, ಶೋಭಾರಾವ್, ಎಂ. ಆರ್. ಕಮಲ, ಶಂಕರ ಕಟಗಿ,
ಹೆಚ್. ಸಿ. ಸೋಮಶೇಖರ್, ಸುಬ್ರಾಯ ಮತ್ತೀಹಳ್ಳಿ, ಮುಕುಂದರಾಜ್
ಮುಂತಾದವರ ಬರಹಗಳು.

---

ಸಂಪಾದಕ/ಮುದ್ರಕ : ಆರ್.ಜಿ. ಹಳ್ಳಿ ನಾಗರಾಜ್, ಪ್ರಕಾಶಕರು : ಅರುಣ ಯುವ ಲೇಖಕರ ಬಳಗ,
ಬೆಂಗಳೂರು-79. ಚೇತನ ಪ್ರಿಂಟರ್ಸ್, ಎಲ್. ಎನ್. ಪುರಂ, ಬೆಂಗಳೂರು-21